17

# ಅಚಲ

ಮಾರ್ಚ್ 2001

ತಿಂಗಳ ಪತ್ರಿಕೆ

## ಒಳಗೇನಿದೆ ?



ಜಾಗೃತಿ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 16 ಸಂಚಿಕೆ - 3

ಸಂಪಾದಕ ಮಂಡಲಿ

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಬಿ. ಎನ್. ಸುಮಿತ್ರಾಬಾಯಿ

ಶಾಂತಾನಾಗರಾಜ್

ಹೆಚ್. ಎನ್: ಗೀತಾ

ಹೇಮಲತಾ ಮಹಿಷಿ

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

*Printed at*
Lipi Mudrana
Bangalore - 560 004


ಆತ್ಮೀಯರೇ,

ಕಳೆದ 15 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಗಮನಿಸಿ

ಅಚಲ ವಿಳಾಸ ಬದಲಾಗಿದೆ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಲಂಚದ ವಿರುದ್ಧದ ಹೋರಾಟಗಾರ್ತಿ

ಇಂದು ತೆಹಲ್ಕಾಮ್ ಲಂಚ ಪ್ರಕರಣ ದೇಶದ ಜನತೆಗೆ ಭಾರಿ ಸುದ್ದಿಯಾಗಿದೆ. ಹಾಗೆಯೇ ಹಲವು ರಾಜಕಾರಣಿಗಳಿಗೆ ಸಿಂಹ ಸ್ವಪ್ನವಾಗಿದೆ. ಅದೇನೇ ಇರಲಿ ಪ್ರಜಾಪ್ರಭುತ್ವ ವ್ಯವಸ್ಥೆಯ ಮಹಾನ್ ರಾಷ್ಟ್ರವೊಂದರ ನೈತಿಕ ಸ್ಥೈರ್ಯಕ್ಕೆ ಇದರಿಂದ ಭಾರಿ ಧಕ್ಕೆಯಾಗಿದೆ. ಆದರೂ ಇಂತಹ ಪ್ರಕರಣಗಳು ಈ ದೇಶದ ಜನತೆಗೆ ಹೊಸದೇನಲ್ಲ, ಈಗಾಗಲೇ ಬೋಫರ್ಸ್ ಪ್ರಕರಣದಂತಹ ಘಟನೆಗಳು ಇಂತಹ ಸಾಧ್ಯತೆಯ ಬಗ್ಗೆ ಜನರಲ್ಲಿ ತಿಳಿವು ಮೂಡಿಸಿವೆ. ಅದರ ಜೊತೆಗೆ ಜನತೆಯ ಜೀವನಾಡಿಯಲ್ಲೇ ಬೆರೆತು ಹೋದಂತೆ ಭಾಸವಾಗುವ ಲಂಚ ಸಂಸ್ಕೃತಿ ಇಂತಹ ಪ್ರಕರಣಗಳನ್ನು ರಾಜಕೀಯದೊಂದಿಗೆ ಸಮೀಕರಿಸುವ ಸಂಪ್ರದಾಯವೂ ನಮ್ಮಲ್ಲಿ ಬೆಳೆದು ಬಂದಿದೆ. ಇಂತಹ ಲಂಚಮಯ ಜಗತ್ತನ್ನು ಸರಿಪಡಿಸಬಹುದೆಂಬ ನಂಬಿಕೆಯೇ ಇಂದಿನ ನಮ್ಮ ಪ್ರಜಾಸತಾತ್ತ್ಮಕ ವ್ಯವಸ್ಥೆಯಲ್ಲಿ ಕುಸಿದುಹೋಗುತ್ತಿರುವಾಗ ಮಧ್ಯಪ್ರದೇಶದ ಸೋಜರಾಬಾಯಿ ಒಂದು ಅಪರೂಪದ ನಿದರ್ಶನವಾಗಿ ನಮ್ಮ ಮುಂದೆ ಗೋಚರಿಸುತ್ತಾರೆ.

ಮಧ್ಯಪ್ರದೇಶದ ಹಾರ್ಡಾ ಜಿಲ್ಲೆಯ ರಾಮಟೆಕ್ ಹಳ್ಳಿಯ ಸರಪಂಚಳಾದ ಸೋಜರಾಬಾಯಿ ಅನಕ್ಷರಸ್ಥ ದಳಿತ ಮಹಿಳೆ. ಅವಳ ಗ್ರಾಮದ ಉಸ್ತುವಾರಿ ವಹಿಸಿದ್ದ ಕಿರ್ಕಿಯಾ ಪಂಚಾಯಿತಿಯ CEO ಮಹಾ ಲಂಚಕೋರನಾಗಿದ್ದನ್ನು ಕಂಡು ಅದರ ವಿರುದ್ಧ ಹೋರಾಡಿ ಜಯಗಳಿಸಿದಳು. CEOನಿಂದಾದ ಅವ್ಯವಹಾರಗಳ ತನಿಖೆ ನಡೆದು ಅವನನ್ನು ಸಸ್ಪೆನ್ಷನ್ ಮಾಡಲಾಯಿತು. ಮಧ್ಯಪ್ರದೇಶ ರಾಜ್ಯ ಸರ್ಕಾರವು ಗ್ರಾಮಪಂಚಾಯಿತಿಗೆ ನೀಡುವ ಹಣವನ್ನು ನೇರವಾಗಿ ಅದರ ಸರಪಂಚರಿಗೆ ತಲುಪಿಸಿ ಗ್ರಾಮದ ಅಭಿವೃದ್ಧಿ ಕಾರ್ಯವನ್ನು ಮಾಡುತ್ತಿದೆ. ಇಂತಹ ಹಿನ್ನೆಲೆಯಲ್ಲಿ ಅನಕ್ಷರಸ್ಥ ದಲಿತ ಹೆಣ್ಣು ಮಗಳಾದ ಸೋಜರಾಬಾಯಿ ತನ್ನ ಹಳ್ಳಿಗರ ಪ್ರೀತಿ, ಒತ್ತಾಸೆಗೆ ಮಣಿದು ಗ್ರಾಮ ಪಂಚಾಯಿತಿಯ ಚುನಾವಣೆಯಲ್ಲಿ ಸ್ಪರ್ಧಿಸಿ ಗೆದ್ದವಳು. ಆರು ಮಕ್ಕಳ ತಾಯಿಯಾದ, ಸಂಕೋಚ ಪ್ರವೃತ್ತಿಯ ಸೋಜರಾ ಯಾವುದೇ ರೀತಿಯ ಸಂಘಟನೆಯ ಅನುಭವವಿಲ್ಲದಿದ್ದರೂ ಪಂಚಾಯಿತಿಗೆ ಸಂದಾಯವಾಗುವ ಹಣ ಲಂಚಕೋರರ ಪಾಲಾಗುವುದನ್ನು ಕಂಡು ಎಚ್ಚೆತ್ತಳು.

ಜವಾಹಾರ್ ಗ್ರಾಮ ಸ್ಮೃತಿ ಯೋಜನೆಯಡಿ 50,000 ರೂಪಾಯಿಗಳು ಮಂಜೂರಾದಾಗ, ಆ ಹಣದ ವಿಲೇವಾರಿಯನ್ನು ಅವಳಿದ್ದ ಗ್ರಾಮಪಂಚಾಯಿತಿಯ ಕಾರ್ಯದರ್ಶಿಯು ಆ ಹಣವನ್ನು ಸಂಪೂರ್ಣವಾಗಿ ಉಪಯೋಗಿಸದೆ, ಅದರ ಸ್ವಲ್ಪ ಭಾಗವನ್ನು ಕಮೀಷನ್ನೆಂದು ತೆಗೆದಿಟ್ಟುಕೊಂಡಾಗ ಸೋಜರಾಬಾಯಿ ಕೆರಳಿ ಕೆಂಡವಾದಳು. ರಸ್ತೆ, ಚರಂಡಿ ನಿರ್ಮಾಣದಲ್ಲಿ ತೊಡಗಿದ್ದ ಕೂಲಿಗಾರರ ಮತ್ತು ತನ್ನ ಗ್ರಾಮ ಪಂಚಾಯಿತಿಯ ಉಳಿದ ಪಂಚರ ನೆರವಿನಿಂದ ಎಲ್ಲ ವ್ಯವಹಾರವನ್ನು ತಾನೇ ನಡೆಸಿದಳು. ಆ ಗ್ರಾಮದ CEOನ ದುರ್ನಡತೆಯನ್ನು ಕಂಡು ಹಳ್ಳಿಗರೆಲ್ಲಾ ಒಟ್ಟಾಗಿ ಸೋಜರಾಬಾಯಿಯ ಬೆಂಬಲಕ್ಕೆ ನಿಂತರು. ಡಿಸ್ಟ್ರಿಕ್ಟ್ ಕಲೆಕ್ಟರ್ ಮತ್ತು ಭೋಪಾಲದಲ್ಲಿನ ಸೆಕ್ರೆಟರಿಯಟ್‌ಗೆ CEOಒಳಗೊಂಡಿದ್ದ ಎಲ್ಲ ಲಂಚ ವ್ಯವಹಾರಗಳ ದೂರು ಸಲ್ಲಿಸಿದರು. ಅಂತೂ ಕೊನೆಗೆ ಲಂಚಕೋರ 10 ದಿನಗಳೊಳಗೆ ಸಸ್ಪೆಂಡ್ ಆದ. ಈ ಹೋರಾಟ ಸೋಜರಾಬಾಯಿಗೆ ಮತ್ತು ಹಳ್ಳಿಗರಿಗೆ ನೆಮ್ಮದಿ ಮತ್ತು ಹೋರಾಟದಲ್ಲಿ ಭರವಸೆಯನ್ನು ಹುಟ್ಟಿಸಿತು. ಇದರ ನೇತೃತ್ವ ವಹಿಸಿದವಳು ಅನಕ್ಷರಸ್ಥಳಾದರೂ ದಿಟ್ಟ ಮಹಿಳೆ. ಇಂದು ಪಂಚಾಯತಿಗಳಲ್ಲಿ ಮೀಸಲಾತಿಯಿಂದಾಗಿ ಹೆಚ್ಚಿನ ಮಹಿಳೆಯರು ಚುನಾಯಿತರಾಗಿ ಬಂದಿರುವಾಗ ಸೋಜರಾಬಾಯಿಯಂತಹ ಹೋರಾಟಗಾರ್ತಿಯರು ಹೆಚ್ಚಾಗಬೇಕು. ದೇಶವನ್ನು ಶುಚಿಗೊಳಿಸುವ ಕೆಲಸವನ್ನು ಯಾವ ರಾಜಕೀಯ ಪಕ್ಷಗಳಿಂದಲೂ ನಿರೀಕ್ಷಿಸದೆ, ನಾಗರೀಕರು ಸ್ವತಃ ತಾವೇ ಕೈಗೆತ್ತಿಕೊಳ್ಳಬೇಕು ಮತ್ತು ಲಂಚಕೋರರ ದುವ್ಯವಹಾರದ ಬಗ್ಗೆ ನಿಗಾವಹಿಸಬೇಕು.

-ಎನ್. ಗಾಯತ್ರಿ

# ಬಿಸಿಲ್ಗುದುರೆ ಬೆನ್ನತ್ತಿದ ಹುಡುಗಿಯರು

- ನೇಮಿಚಂದ್ರ

ಹತ್ತು ವರ್ಷಗಳ ಹಿಂದೆ, ಹನ್ನೆರಡು ವರ್ಷದ ಎಳೆಯ ಬಾಲಕಿ ಅಮೀನಾಳನ್ನು ಅರವತ್ತು ವರ್ಷದ ಅರಬ್ ಶೇಖ್ ಆಲ್-ಸಗಷ್‌ನ್ ಹಿಡಿತದಿಂದ ಬಿಡಿಸಿ ಗಗನ ಸಖಿ ಅಮೃತಾ ಅಹ್ಲುವಾಲಿಯ ರಕ್ಷಿಸಿದ್ದರು. ಪತ್ರಿಕೆಗಳ ತುಂಬಾ ಸುಳಿದಾಡಿದ ಅಮೀನಾಳನ್ನು ಅರಬರ ಶೇಖ್‌ನಿಂದೇನೋ ರಕ್ಷಿಸಿದ್ದಾಗಿತ್ತು, ಆದರೆ ಆಕೆಯನ್ನು 'ಮದುವೆಯೊಂದೇ ಹೆಣ್ಣಿನ ಬದುಕಿನ ಸರ್ವಸ್ವ' ಎಂಬ ಜಡ್ಡುಗಟ್ಟಿದ ಮೌಲ್ಯಗಳಿಂದ, ಅಪ್ಪಟ ಆಲಸ್ಯದಿಂದ ರಕ್ಷಿಸಲಾಗಲಿಲ್ಲ.

ಕೆಲ ವರ್ಷಗಳ ನಂತರ ಅಮೀನಾ ಎಲ್ಲಿದ್ದಾಳೆ, ಹೇಗಿದ್ದಾಳೆ ಎಂದು ಹುಡುಕಿ ಹೊರಟ ಪತ್ರಿಕೆಗಳಿಗೆ ಸಿಕ್ಕ ಸುದ್ದಿ ನಿರಾಶೆ ತರಿಸಿತ್ತು. ಹೈದರಾಬಾದಿನ ಚಾರ್ಮಿನಾರ್ ಬಳಿ ಅಮೀನಾ ತನ್ನ ಕುಟುಂಬದೊಡನಿದ್ದಳು. ಆರು ಜನ ಮಕ್ಕಳ ಕುಟುಂಬ ತಂದೆ ಬದಿರುದ್ದೀನ್‌ನದು. ಆಟೋ ಓಡಿಸುವ ಈತನಿಗೆ ಸರಕಾರ ಒಂದು ಎಸ್.ಟಿ.ಡಿ ಬೂತ್ ಕೊಡಿಸಿದ್ದೂ ಉಂಟು. ಅದನ್ನು ನೆರೆಮನೆಗೆ ರವಾನಿಸಿದ. ಸರಕಾರ ಈತನ ಮಕ್ಕಳೆಲ್ಲರಿಗೂ ಉಚಿತ ವಿದ್ಯಾಭ್ಯಾಸದ ಆಶ್ವಾಸನೆ ನೀಡಿತು. ಆದರೆ ಅಮೀನಾಳನ್ನು ಕೇಳಿದರೆ, 'ನನಗೆ ಓದಲು ಇಷ್ಟವಿಲ್ಲ. ಶಾಲೆಗೆ ಹೋಗಲು ಬೆಳಗ್ಗೆ ಬೇಗ ಏಳಬೇಕು, ಅದು ತುಂಬಾ ಕಷ್ಟ' ಎಂದಿದ್ದಳು. ಅಮೀನಾಳಿಗೆ ಜರಿ ಕೆಲಸದಲ್ಲಿ ತರಪೇತು ಕೊಡಿಸಿ, ಅಮೃತಾ ಅಹ್ಲುವಾಲಿಯ ಆಕೆಗೊಂದು 7000 ರೂಪಾಯಿಯ ಮನೆಯಲ್ಲೇ ಜರಿ ಕೆಲಸ ಮಾಡಲು 'ಫ್ರೇಮ್' ಕೂಡಾ ತಂದು ಕೊಟ್ಟರು. ಆದರೆ ಅಮೀನಾ ಅದನ್ನು ಮೂಲೆಗಿಟ್ಟಿದ್ದಳು. 'ಅಯ್ಯೋ ಜರಿ ಕೆಲಸ ಕಷ್ಟದ್ದು, ಸೊಂಟ ನೋಯುತ್ತೆ' ಅಂದಿದ್ದಳು. 'ಮಹಿಳಾ ದಕ್ಷತಾ ಸಮಿತಿ'ಯ ಅಧ್ಯಕ್ಷೆ, ಸುಮನ್ ಕೃಷ್ಣಕಾಂತ್ ಅಮೀನಾಗೊಂದು ಅಂಗಡಿ ಇಟ್ಟುಕೊಡಲು ಮುಂದೆ ಬಂದರು. ನನಗೆ ಮನೆಯಿಂದ ಹೊರಹೋಗಲು ಇಷ್ಟವಿಲ್ಲ, ಅದೂ ಎಲ್ಲಾ ಬಿಟ್ಟು ಕೆಲಸ ಮಾಡಲು. ಈ ಬಸ್ಸುಗಳಲ್ಲಿ ಹೋಗಿ ಬರುವುದು ಕಷ್ಟದ್ದು' ಎಂದಿದ್ದಳು. ಅಮೀನಾ. 'ಮತ್ತೆ ಹೇಗೆ ಸಮಯ ಕಳೆಯುತ್ತೀಯಾ?' ಎಂದರೆ 'ಟಿವಿ ನೋಡುತ್ತಾ, ನನಗೆ ಟಿವಿ ಎಂದರೆ ತುಂಬಾ ಇಷ್ಟ' ಉದ್ಗರಿಸಿದ್ದಳು. ಕಡೆಗೆ ಅಮೀನಾ ಹಿಡಿದು ಬಂದ ಚಾಯಿಯ ಕಪ್ಪು ನೋಡಿ 'ನೀನೇ ಮಾಡಿದ್ದಾ ಅಮೀನಾ?' ಎಂದು ಪ್ರಶ್ನಿಸಿದವರಿಗೆ 'ನನಗೆ ಅಡಿಗೆ ಮಾಡೋಕೆ ಇಷ್ಟ ಇಲ್ಲ, ಹೋಟೆಲಿನಿಂದ ತರಿಸಿದ್ದು' ಎಂಬ ಉತ್ತರ. 'ಮತ್ತೇನಮ್ಮ ಮಾಡ್ತೀಯಾ?' ಕೇಳಿದ್ರೆ 'ನಾನು ಮದುವೆಯಾಗಬಯಸುತ್ತೇನೆ. ನನಗೆ ಮತ್ತಿನ್ನಾವ ಯೋಚನೆಯೂ ಬರುವುದಿಲ್ಲ' ಅಂದಿದ್ದಳು!

ಬದುಕು, ಸಮಾಜ, ಅಮೃತಾರಂತಹ ಸಹಾಯಕರು ನೂರು ಅವಕಾಶಗಳ ಬಾಗಿಲು ತೆರೆದರೂ, ಕಿಂಚಿತ್ತೂ ಶ್ರಮ ಪಡಲು ಸಿದ್ಧವಿಲ್ಲದೆ ಸುಲಭ ವಿವಾಹದ ಹಾದಿಯನ್ನು ಕಾಯುವ ಅಮೀನಾಳಂಥಾ ಎಳೆ ಹುಡುಗಿಯರಿಗೆ, ಒಂದು ಕೆಟ್ಟ ಅನುಭವದ ನಂತರವೂ ವಿವಾಹವೊಂದು ರಮ್ಯ ಅದ್ಭುತ ಪ್ರಪಂಚ. ಮದುವೆ ಸುಲಭ ಆರಾಮದ ಐಷಾರಾಮದ ಮಾರ್ಗವಾಗಿ ಕಾಣುತ್ತದೆ. ಅಮೀನಾ ಎಳೆಯ ವಯಸ್ಸು, ಆಕೆ ಬೆಳೆದು ಬಂದ ಪರಿಸರ, ಬಡತನದ ಕುಟುಂಬ ಇವೆಲ್ಲದರ ಹಿನ್ನೆಲೆಯಲ್ಲಿ ಬಹುಶಃ ಬದುಕಿನತ್ತಲ ಆಕೆಯ ಧೋರಣೆಗಳನ್ನು ಅರ್ಥಮಾಡಿಕೊಳ್ಳಬಹುದು. ಆದರೆ ಇಂದು ಮಧ್ಯಮವರ್ಗದ ವಿದ್ಯಾವಂತ ಹುಡುಗಿಯರು, ಸ್ವತಃ ದುಡಿದು ಗಳಿಸಬಲ್ಲ ತಾಕತ್ತಿನ ಹುಡುಗಿಯರು, ಸುಲಭ ಆರಾಮದ ಮದುವೆಯ ಕನಸಿನಲ್ಲಿ, ವಿದೇಶಿ ನೆಲದಲ್ಲಿ ಶ್ರೀಮಂತ ಐಷಾರಾಮದ ಬದುಕಿನ ಹುಚ್ಚಿನಲ್ಲಿ ಎನ್.ಆರ್.ಐ. ಗಂಡುಗಳಿಗೆ ಹಂಬಲಿಸಿ ಜೀವನವನ್ನು ಹಾಳುಮಾಡಿಕೊಳ್ಳುತ್ತಿರುವುದಕ್ಕೆ ಏನು ಹೇಳುವುದು? 'ವಿವಾಹ ಜನ್ಮಜನ್ಮಗಳ ಸಂಬಂಧ' ಎನ್ನುವ ಕಾಲವಿತ್ತು. ಇಂದು ವಿವಾಹ, 'ವಿದೇಶಕ್ಕೆ ಹೋಗುವ ವೀಸಾ' ಮಾತ್ರವಾಗಿದೆ. ಹೇಗಾದರೂ ಸರಿ ವಿದೇಶ ಸೇರಬೇಕು, ಶ್ರೀಮಂತ ಬದುಕು ಬೇಕು ಎನ್ನುವ ಈ ಹುಡುಗಿಯರು ಬಡತನದ ಬದುಕಿನಲ್ಲಿ ಸಿಕ್ಕಿಬಿದ್ದವರಲ್ಲ. ಲಕ್ಷ ಲಕ್ಷ ರೂಪಾಯಿ ಖರ್ಚು ಮಾಡಿ,ಮದುವೆ ಮಾಡಿಕೊಂಡು ಹೋಗುವ ಈ ಹುಡುಗಿಯರು, ಇಲ್ಲಿ ಇದ್ದಷ್ಟರಲ್ಲಿ ತೃಪ್ತರಲ್ಲ, ಧಿಡೀರ್ ಹಣ, ವಿದೇಶಿ ಹಣ, ವಿದೇಶಿ ಬದುಕಿನ ಅಪಾರ ಮೋಹದಲ್ಲಿ ಸಿಕ್ಕಿಬಿದ್ದವರು. ಇವರು ಹುಡುಕಿ ಹೊರಡುವುದು ಎನ್.ಆರ್.ಐ. ಗಂಡನ್ನು ಮಾತ್ರ.

ಈ ಕತೆಗಳನ್ನು ಕೇಳಿ - ಪ್ರಬುದ್ಧ ವಿದ್ಯಾವಂತ ಹುಡುಗಿಯರು ವಿದೇಶದ ಐಷಾರಾಮದ ಆಸೆಗೆ ಎನ್.ಆರ್.ಐ. ಗಂಡುಗಳನ್ನು ಕಟ್ಟಿಕೊಂಡು ಪರದಾಡುವ ಕತೆಗಳನ್ನು.

ಪಂಜಾಬಿನ ಡೋಬಾ ಎಂಬ ಸ್ಥಳ. ಎಂಟು ವರ್ಷದ ಹಿಂದೆ ಇಪ್ಪತ್ತೊಂದು ವರ್ಷದ ಬಿ.ಎ,. ಬಿ.ಎಡ್, ಡಿಗ್ರಿ ಪಡೆದ ಸುಂದರ ಹುಡುಗಿ ಬಲ್ಜಿಂದರ್ ಕೌರ್, ಕ್ಯಾಲಿಫೋರ್ನಿಯಾದಲ್ಲಿ ಬಸ್ ಡ್ರೈವರ್ ಆಗಿದ್ದ ನರಿಂದರ್ ಸಿಂಗ್‌ನನ್ನು ವಿವಾಹವಾದಳು. ಬಹುಶಃ ಭಾರತದಲ್ಲಿ ಡ್ರೈವರ್ ಎಂದಿದ್ದರೆ, ಈ ಹುಡುಗಿ ಮತ್ತು ಆಕೆಯ ತಂದೆ-ತಾಯಿ ತಿರುಗಿ ಕೂಡಾ ನೋಡುತ್ತಿರಲಿಲ್ಲ. ಆದರೆ ವಿದೇಶದ ಆಕರ್ಷಣೆ ಬಲ್ಜಿಂದರ್ ಈ ವಿವಾಹದಿಂದ ಹಿಗ್ಗುವಂತೆ ಮಾಡಿತ್ತು. ಬಲ್ಜಿಂದರ್ ವಿವಾಹ ನೆರವೇರಿತು. ಎರಡು ತಿಂಗಳ ರಜೆ, ಮಧುಚಂದ್ರ ಮುಗಿಸಿ ನರಿಂದರ್, 'ಹೆಂಡತಿಗೆ ಕರೆ ಕಳುಹಿಸುವುದಾಗಿ' ಹೇಳಿ ಹೊರಟು ಹೋದ. ತಿಂಗಳುಗಳು ಕಳೆದವು 'ಕರೆ' ಬರಲಿಲ್ಲ. ಬಂದ ದೂರವಾಣಿ ಕರೆಯಲ್ಲಿ 'ತಾನು ಗರ್ಭಿಣಿ' ಎಂದು ಬಲ್ಜಿಂದರ್ ತಿಳಿಸಿದಾಗ, ತಕ್ಷಣ ಗರ್ಭಪಾತ ಮಾಡಿಸಿಕೊಳ್ಳಲು ಹೇಳಿದ.

'ಮಗುವಿನೊಡನೆ ಅಮೆರಿಕೆಗೆ ಬರೋದು ಕಷ್ಟ, ಮಗು ಇಲ್ಲಿಯೇ ಅಮೆರಿಕದಲ್ಲಿ ಹುಟ್ಟಿದರೆ ಒಳಿತು' ಎಂದು ಉಪದೇಶಿಸಿದ. ಗರ್ಭಪಾತ ಮಾಡಿಸಿಕೊಂಡದ್ದಾಯಿತು. ತಿಂಗಳುಗಳು ಉರುಳಿದವು. ಮತ್ತೊಮ್ಮೆ ರಜೆಗೆ ನರಿಂದರ್ ಭಾರತಕ್ಕೆ ಬಂದ. ಮತ್ತೆ ಬಲ್ಜಿಂದರ್ ಗರ್ಭಿಣಿ, ಮತ್ತೆ ಗರ್ಭಪಾತ. ಹಿಂತಿರುಗಿ ಹೋದ ಗಂಡನಿಂದ ಇಮ್ಮಿಗ್ರೇಷನ್ ಪತ್ರ ಬರುವುದೆಂದು ಕಾದದ್ದೇ ಕಾದದ್ದು. ಪತ್ರಗಳಿರಲಿ, ದೂರವಾಣಿ ಕರೆಗಳು ನಿಂತವು. ಆತಂಕದಿಂದ ಬಲ್ಜಿಂದರ್ ಫೋನ್ ಮಾಡಿದಾಗ, 'ತಾನು ವಿಚ್ಛೇದನ ಮಾಡುವುದಾಗಿ' ಹೇಳಿ ಫೋನ್ ಕುಕ್ಕಿದ. ಯಾವ ವಿದೇಶದ ಆಸೆಯಿಂದ ಬಲ್ಜಿಂದರ್ ವಿವಾಹವಾಗಿದ್ದಳೋ, ಆ ವಿದೇಶದ ನೆಲದಲ್ಲಿ ಕಾಲಿಡಿಸುವ ಅವಕಾಶವೂ ಇಲ್ಲದೆ, ಬಲ್ಜಿಂದರ್ ವಿಚ್ಛೇದಿತಳಾಗಿದ್ದಳು.

ಭಾರತದ ಹುಡುಗನಾದರೆ ಡಾಕ್ಟರ್, ಇಂಜಿನಿಯರ್ ಎಂದು ಬಯಸುವ ಓದಿದ ಈ ಹುಡುಗಿಯರು ಮತ್ತು ಅವರ ಮಾತಾಪಿತೃಗಳು, ಬಸ್ ಡ್ರೈವರ್ ಆದರೂ ಚಿಂತೆ ಇಲ್ಲ, ಎನ್.ಆರ್.ಐ. ಆಗಿರಬೇಕು ಎಂದು ವಿವಾಹ ಮಾಡಿ ಕೊಡಲು ಧಾವಿಸುವುದು ಅಮೆರಿಕ ಸೇರುವ ಮಹದಾಸೆಯಿಂದ. ಈ ವಿದೇಶದ ಮೋಹ ಎಷ್ಟೊಂದು ಎಂದರೆ ತಮ್ಮ ಸುತ್ತಮುತ್ತಲೇ ಎನ್.ಆರ್.ಐ. ವಿವಾಹಗಳು ಕುಸಿದು ಬೀಳುತ್ತಿದ್ದರೂ, ಇವರ ಎನ್.ಆರ್.ಐ. ಗಂಡಿನ ಹುಚ್ಚು ಕೊಂಚವೂ ತಗ್ಗಿಲ್ಲ. ಇಂಥ 'ರಜೆಯ ಮದುವೆ'ಗಳು ಒಂದಲ್ಲ ಎರಡಲ್ಲ, ಸಾವಿರಾರು ಎನ್.ಆರ್.ಐ. ಮದುವೆಗಳು ಈ ದೋಬಾ ಪ್ರಾಂತದಲ್ಲಿ ನಡೆದಿವೆ, ನಡೆಯುತ್ತಿವೆ. ಲಾಯರ್ ಸಾವರನ್ ಲಾಲ್ ಅವರ ಪ್ರಕಾರ ಶೇಕಡ 80ರಷ್ಟು ಇಲ್ಲಿಯ ಎನ್.ಆರ್.ಐ.ಮದುವೆಗಳು ಸೋತಿವೆ.

ಅಂದಹಾಗೆ, ಕಳೆದ ಅನೇಕ ವರ್ಷಗಳಿಂದ ಬಲ್ಜಿಂದರ್‌ಗೆ ಮರು ವಿವಾಹ ಮಾಡಲು ಹುಡುಕಾಡುತ್ತಿದ್ದಾರೆ. ಆದರೆ ಅದು ಅಷ್ಟು ಸುಲಭವಿಲ್ಲ. 'ನನಗೆ ಯಾವ ಒಳ್ಳೆಯ ಸಂಬಂಧವೂ ಬಂದಿಲ್ಲ. ಯಾರಾದರೂ ಅವಿವಾಹಿತ ಹುಡುಗ ಸಿಕ್ಕರೆ ಆತ ಬಡವನಾಗಿರುತ್ತಾನೆ. ಒಳ್ಳೆ ಶ್ರೀಮಂತನನ್ನು ನೋಡಿದರೆ, ಆತ ಮುದುಕನಾಗಿರುತ್ತಾನೆ, ಮಕ್ಕಳೊಂದಿಗನಾಗಿರುತ್ತಾನೆ. ನನ್ನ ಮಾಜಿ ಗಂಡ, ಇನ್ನು ಇಪ್ಪತ್ತು ವರ್ಷ ಬಿಟ್ಟುಕೊಂಡು ಬಂದರೂ, ಎಷ್ಟು ಜನ ಬೇಕಾದರೂ ಹುಡುಗಿಯರು ಸಿಗುತ್ತಾರೆ' ಎಂದು ಕೋಪದಿಂದ ನುಡಿಯುವ ಬಲ್ಜಿಂದರ್, ಈ ಪರಿಸ್ಥಿಗೆ ತನ್ನಂಥ ಹುಡುಗಿಯರು ಮತ್ತು ಮಾತಾಪಿತೃಗಳೇ ಕಾರಣ ಎನ್ನುವುದನ್ನು ಮರೆಯುತ್ತಾಳೆ.

'ನಾನು ಎನ್.ಆರ್.ಐ. ಮದುವೆಯಾಗಿ, ಜೀವನ ಹಾಳು ಮಾಡಿಕೊಂಡೆ' ಎಂದು ಪರಿತಪಿಸುವ ಬಲ್ಜಿಂದರ್‌ಗೆ ವಿದೇಶದ ಮೋಹವೇನೂ ಇಳಿದಿಲ್ಲ. 'ಎಂದಾದರೂ ತಾನೂ ಗಂಡ ಮನೆ ಮಕ್ಕಳು ಪಡೆದು ಸೆಟಲ್ ಆಗಬೇಕೆಂದು' ಕನಸು ಕಾಣುವ ಬಲ್ಜಿಂದರ್, 'ಆತ ಎನ್.ಆರ್.ಐ. ಆದರೆ ಒಳ್ಳೆಯದು. ನಾನು ಅಮೆರಿಕಗೆ ಹೋಗಲು ಇಚ್ಛಿಸುತ್ತೇನೆ. ಮತ್ತೇನಕ್ಕಲ್ಲದಿದ್ದರೂ, ನರೀಂದರನ್ನು ಭೇಟ್ಟಿಯಾಗಿ ನಿನ್ನ ಹೊರತಾಗಿಯೂ ನಾನು ಅಮೆರಿಕದಲ್ಲಿರುವೆ ಎಂದು ಮುಖಕ್ಕೆ ಹೇಳುವ ಸಲುವಾಗಿಯಾದರೂ ಎನ್ನುತ್ತಾಳೆ.

ವಿದೇಶದ ಶ್ರೀಮಂತ, ಐಷಾರಾಮದ ಬದುಕು ಬಹಳಷ್ಟು ಮಾತಾಪಿತೃಗಳನ್ನು, ಹೆಣ್ಣು ಮಕ್ಕಳನ್ನು ವಿದೇಶದಲ್ಲಿರುವ ಗಂಡು ಹುಡುಕುವಂತೆ ಪ್ರೇರೇಪಿಸುತ್ತದೆ. ರಜೆಗೆ ಬರುವ ಹುಡುಗ, ಅವರಸರದಲ್ಲಿ ನಿಶ್ಚಿತಾರ್ಥ, ವಿವಾಹ, ಒಂದೆರಡು ತಿಂಗಳ ಮಧುಚಂದ್ರ ಮುಗಿಸಿ ಹೋದನೆಂದರೆ, ಪತ್ತೆ ಇರುವುದಿಲ್ಲ. ಇದು ಒಬ್ಬಿಬ್ಬರ ಕತೆಯಲ್ಲ.

ವಿದೇಶದಲ್ಲಾಗಲೇ ವಿವಾಹವಾಗಿದ್ದರೂ, ಭಾರತದಲ್ಲಿ ಬಿಟ್ಟು ಹೋದ ತಮ್ಮ ವಯಸ್ಸಾದ ತಂದೆ ತಾಯಿಗಳನ್ನು ನೋಡಿಕೊಳ್ಳಲು ಇಲ್ಲೊಂದು ವಿವಾಹವಾಗಿ, ಇಲ್ಲಿಯೇ ಹೆಂಡತಿಯನ್ನು ಬಿಟ್ಟು ಹೋದ ಎನ್.ಆರ್.ಐ. ಪ್ರಸಂಗಗಳೂ ಬೇಕಾದಷ್ಟಿವೆ. ಹೀಗಿದ್ದೂ ಹೆಣ್ಣು ಹೆತ್ತವರಿಗೆ 'ವಿದೇಶಿ ಸಂಬಂಧ'ದ ಅಪಾರ ಆಸೆ. ಇವರು ಇಲ್ಲಿ ಭಾರತದಲ್ಲಿ ಅನ್ನ ಬಟ್ಟೆ ಇಲ್ಲದ ಕಡು ಬಡವರಲ್ಲ, ಅವಿದ್ಯಾವಂತರಲ್ಲ, ವಿದ್ಯಾವಂತ ಮಧ್ಯಮ ವರ್ಗದ ಜನ, ಲಕ್ಷ ಲಕ್ಷ ಖರ್ಚು ಮಾಡಿ ಮದುವೆ ಮಾಡಬಲ್ಲವರು. ಅವರಸರದ ಈ ಎನ್.ಆರ್.ಐ. ವಿವಾಹಗಳಲ್ಲಿ ಹುಡುಗಿಯರು ಮೋಸ ಹೋಗುವುದನ್ನು ಕಣ್ಣಾರೆ ಕಾಣುವವರು. ಆದರೂ ಈ ಅಪಾಯದ ಆಟ ನಿಲ್ಲುವುದಿಲ್ಲ. ವಿದೇಶೀ ನೆಲದ ಆಸೆ ತಪ್ಪುವುದಿಲ್ಲ. ಈ ಎನ್.ಆರ್.ಐ. ವಿವಾಹಗಳು ಸದ್ದಿಲ್ಲದೆ, ಸುದ್ದಿಯಾಗದೆ, ಒಳಗೊಳಗೇ ಅವಸರವಸರವಾಗಿ ಜರುಗುತ್ತವೆ. ಹೇಳಿ, ಕೇಳಿ, ವಿಚಾರಿಸಲು ಯಾರಿಗೂ ಪುರಸತ್ತಿಲ್ಲ. ಕಾರಣ, ಯಾರಿಗಾದರೂ ತಮಗೆ ವಿದೇಶಿ ಗಂಡು ಸಿಕ್ಕಿದ್ದು ತಿಳಿದುಬಿಟ್ಟರೆ, ಅವರು ಆ ಗಂಡನ್ನು ಲಪಟಾಯಿಸಿ ಬಿಡುತ್ತಾರೆಂಬ ಭಯ.

ಬಲ್ಜಿಂದರ್ ತಾಯಿ 'ನಮ್ಮ ಈ ಜನಕ್ಕೆ ವಿದೇಶಿ ಗಂಡಿನ ಹುಚ್ಚು ಎಷ್ಟಿದೆ ಎಂದರೆ, ವಿದೇಶದಿಂದ ಒಂದು ನಾಯಿ ಬಂದರೂ ಅದಕ್ಕೆ ನಮ್ಮ ಮಗಳನ್ನು ಕೊಡಲು ಓಡುತ್ತಾರೆ. ಕಡು ಕಪ್ಪು ಕೂದಲಿನ, ಮುಖದ ತುಂಬಾ ಸುಕ್ಕಿರುವ ಮುದುಕರು, ಮೊಮ್ಮಗಳ ವಯಸ್ಸಿನ ಹುಡುಗಿಯರನ್ನು ಮದುವೆಯಾಗುತ್ತಾರೆ' ಎಂದು ಆಕ್ರೋಶದಿಂದ ಹೇಳುತ್ತಾರೆ. ಆದರೆ ಇಂತಹ ಪರಿಸ್ಥಿತಿಗೆ ತಮ್ಮಂತಹ ತಾಯ್ತಂದೆಯರೇ ಕಾರಣ ಎಂದು ಮರೆಯುತ್ತಾರೆ. ಈಕೆ ಬಲ್ಜಿಂದರ್ ಮದುವೆಗೆ ಖರ್ಚು ಮಾಡಿದ್ದು ಒಟ್ಟು ಆರು ಲಕ್ಷ! 'ಎನ್.ಆರ್.ಐ. ಮದುವೆಯಾದರೆ, ಇಡೀ ಕುಟುಂಬ ಶ್ರೀಮಂತವಾಗಬಹುದು. ನನ್ನ ಅಣ್ಣತಮ್ಮಂದಿರನ್ನೂ ವಿದೇಶಕ್ಕೆ ಕರೆಸಿಕೊಳ್ಳಬಹುದು. ಇಲ್ಲಿ ಪ್ರತಿ ಹಳ್ಳಿಯಲ್ಲಿ ಮಗ ಅಮೆರಿಕಗೆ ಹೋದ ಮೇಲೆ ದೊಡ್ಡ ಅರಮನೆಯಂಥ ಮನೆಯ ಕಟ್ಟಿಸಿಕೊಂಡು, ಕಾರು, ಕಲರ್ ಟಿವಿ ಇಟ್ಟುಕೊಂಡ ಜನರಿದ್ದಾರೆ. ಕನಸು ಕಾಣುವುದು ತಪ್ಪೇ?' ಪ್ರಶ್ನಿಸುತ್ತಾಳೆ ಮಗಳು. ಕನಸು ಕಾಣುವುದು ತಪ್ಪಲ್ಲ, ಆದರೆ ತಮ್ಮ ಕನಸುಗಳು ನನಸಾಗಿಸಲು

8ನೆಯ ಪುಟಕ್ಕೆ ಮುಂದುವರಿಯುವುದು

# 'ಆನಂದ ಝುಲಾಗೊಂದಲಾಯ'

- ಶಾಂತನಾಗರಾಜ್

ಶಾಲ್ಮಲಿ ಆ ಹಳೆಯ ಮನೆಯ ಹಜಾರದ ಬಾಗಿಲಿಗೆ ಬರುವ ವೇಳೆಗೇ ಗೊಂದಲದವರ ಢಂಕದ ಶಬ್ದ ಮುಗಿಲ ಮುಟ್ಟಿತ್ತು. ಉಧೋ ಉಧೋ ಧ್ವನಿ ಭಯಂಕರವಾಗಿ ಗಿರಿಕಿ ಹೊಡೆಯುತ್ತಾ ಢಂಕದ ಟರಟರ ಧ್ವನಿಯೊಂದಿಗೆ ಸ್ಪರ್ಧಿಸುತ್ತಿತ್ತು. ಶಾಲ್ಮಲಿಗೆ ಇದು ತೀರಾ ಅಪರಿಚಿತ ದೃಶ್ಯ. ಅಜ್ಜ ಇದನ್ನು ವರ್ಣಿಸುವಾಗಲೆಲ್ಲ ಅದನ್ನು ಪೂರಾ ಕಣ್ಣಿಗೆ ಕಟ್ಟಿ ಕೊಂಡಿದ್ದೇನೆ ಎಂಬು ಭಾವಿಸಿದವಳಿಗೆ, ಈಗ ಭಾಸವಾಗ ತೊಡಗಿತು ತಾನು ಕಟ್ಟಿಕೊಂಡಿದ್ದ ದೃಶ್ಯ ಹೀಗಿರಲಿಲ್ಲ ಎಂದು. ಅವಳ ಕಲ್ಪನೆಯಲ್ಲಿ ಬರಿ ಚಿತ್ರವಿತ್ತು . ಈ ಶಬ್ದ? 'ಅಬ್ಬಾ ಘೋರ' ಎಂದುಕೊಂಡಳು.

ಅಲ್ಲಿ ಢಂಕ ಬಾರಿಸುತ್ತಿದ್ದವರು, ಅವರ ಮುಂದೆ ಯದ್ವಾ ತದ್ವಾ ಕುಣಿಯುತ್ತಿದ್ದವರು, ಕುಣಿಯುವವರನ್ನು ನೋಡುತ್ತಿದ್ದ ವರು, ಹೆದರಿ ಪಕ್ಕದ ರೂಮಿನಲ್ಲಿ ಅವಿತು ಕಿಟಕಿಯಿಂದ ಸರದಿಯ ಮೇಲೆ ಇಣಿಕುತ್ತಿದ್ದವರೂ, ಮಧ್ಯೆ ಅಂಬಾಭವಾನಿಯ ಪ್ರತಿಮೆಯಬಳಿ ಕುಳಿತು ಪೂಜಿಸುತ್ತಿದ್ದವರು, ಯಾರು ಯಾರಿಗೂ ಈ ಬಾಗಿಲಲ್ಲಿ ನಿಂತ ಜೀನ್ಸ್, ಟಿ ಶರ್ಟ್ ಧರಿಸಿದ, ಬಾಯ್‌ಕಟ್ ಮಾಡಿಕೊಂಡ, ಇತ್ತೀಚೆಗೆ ಪೀಟರ್‌ನನ್ನು ಮದುವೆಯಾದ, ಈ ಹುಡುಗಿಯ ಉಪಸ್ಥಿತಿ ಅರಿವಾಗಲೇ ಇಲ್ಲ.

ಅದೇ ಹಜಾರದಲ್ಲಿದ್ದ ಮರದ ಮೆಟ್ಟಿಲುಗಳಲ್ಲಿ ಸ್ವಲ್ಪ ಎತ್ತರದಲ್ಲಿ 6ನೇ ಮೆಟ್ಟಿಲ ಮೇಲೆ ನಿಂತ ತನ್ನದೇ ವಂಶದ ಪುಟ್ಟ ಚಿಗುರು ಗೋಚರವಾಗಿಯೇ ಬಿಟ್ಟಿತು. ಮೆಟ್ಟಿಲನ್ನು ಹತ್ತುವಾಗ ಹಿಡಿಯಲು ಹಾಕಿದ್ದ ಕಟಕಟೆಯ ನಡುವೆ ತಮ್ಮ ಕೃಶ ಕೈಗಳನ್ನು ತೋರಿಸಿ ಅಂಬಜ್ಜಿ ಶಾಲ್ಮಲಿಯನ್ನು ಇಲ್ಲಿ ಬಾ ಎಂಬಂತೆ ಕರೆದರು. ಕಕ್ಕಾಬಿಕ್ಕಿಯಾಗಿ ಎಲ್ಲವನ್ನೂ ಗಮನಿಸುತ್ತಿದ್ದ ಶಾಲ್ಮಲಿಗೆ ತನಗೆ ಸರಿಯಾಗೆ ಎದುರಿಗೇ ಸ್ವಲ್ಪ ಎತ್ತರದಲ್ಲಿ ಕೈಯೊಂದು ಆಡುತ್ತಿರುವುದು ಗೋಚರವಾಗಿ ತನ್ನ ಮುತ್ತಜ್ಜಿಯನ್ನು ಗುರುತಿಸಿ ಸ್ವರ್ಗಸಿಕ್ಕಂತೆ ಖುಷಿಯಾಗಿ, 'ಬಂದೆ' ಎಂದು ಸನ್ನೆ ಮಾಡಿ ನಿಧಾನಕ್ಕೆ ತನ್ನ ಶೂ ಕಳಚಿಟ್ಟು ಆ ಸುತ್ತುವ ಜನರ ನಡುವೆ ಮೆತ್ತಗೆ ನುಸುಳುತ್ತಾ ಅಂತೂ ಇಂತೂ ಮುತ್ತಜ್ಜಿಯನ್ನು ತಲುಪಿದಳು. ಮುತ್ತಜ್ಜಿಯ ಪಕ್ಕದಲ್ಲೇ ಆಸೀನಳಾದಳು.

ಒಂದಿಬ್ಬರು ನೆಂಟರು ಈ ಕಿರಿಸ್ತಾನದಳವಂತೆ ಕಾಣುವ ಹುಡುಗಿಯೋ ಹುಡಗನೋ ಗೊತ್ತಾಗದಂತಹ ವ್ಯಕ್ತಿಯೊಂದು ಮನೆಯ ಅತ್ಯಂತ ಹಿರಿಜೀವ ಅಂಬಜ್ಜಿಯ ಪಕ್ಕದಲ್ಲೇ ವಕ್ಕರಿಸಿದ್ದು ಗಮನಿಸಿ ಗೊಂದಲಗೊಂಡರೂ, ದೇವಿ ಸ್ವಮೂರ್ತಳಾಗಿ ಕೆಲವರ ಮೈಮೇಲೆ ಬಂದು ಆನಂದದಿಂದ ಕುಣಿಯುತ್ತಿರುವಾಗ ಆಕೆಯ ಕೃಪೆಗೆ ಪಾತ್ರರಾಗುವುದು ಬಿಟ್ಟು, ಇಲ್ಲದ ಉಸಾಬರಿ ಯಾಕೆ ಎಂದು, ಕುತೂಹಲಕ್ಕೆ ಕಡಿವಾಣ ಹಾಕಿದರು. ಆದರೆ ಅಜ್ಜಿಯ ಒಂದಿಬ್ಬರು ಸೊಸೆಯರಿಗೆ ಮಾತ್ರ ಕಣ್ಣು ಕಿರಿದಾಯಿತು. ಒಬ್ಬಳು ಪಿಸುಗುಟ್ಟಿದಳು ''ಇವಳ್ಯಾರೆ ವಕ್ಕರಿಸಿದಳು ಇಲ್ಲಿ'' ಅದಕ್ಕೆ ಮತ್ತೊಬ್ಬಳು ''ಗೊತ್ತಿಲ್ಲ ಅತ್ತೆಯ ಕಿತಾಪತಿ ಇರಬೇಕು'' ಎಂದು ಅದೇ ಪಿಸುಧ್ವನಿಯಲ್ಲೇ ಉತ್ತರಿಸಿ ಸುಮ್ಮನಾದಳು. ಏಕೆಂದರೆ ಹೆಚ್ಚು ಮಾತನಾಡಿದರೆ ಕಥೆಯನ್ನು ರಾಗವಾಗಿ ಹೇಳುತ್ತಾ, ಬಾರಿಸುತ್ತಾ ಇರುವ ಢಂಕದವರು 'ಸದ್ದು ಎಂದು ಗದರುತ್ತಾರೆನ್ನುವ ಭಯಕ್ಕೆ.

''ಯಾವಾಗ ಬಂದೆ ಇಲ್ಲಿಗೆ? ಹೇಗೆ ಬಂದೆ'' ಕ್ಷೀಣ ಧ್ವನಿಯಲ್ಲಿ ಮರಿಮಗಳನ್ನು ವಿಚಾರಿಸಿತು ಅಂಬಜ್ಜಿ. ''ಬೆಳಿಗ್ಗೆ 6ಕ್ಕೇ ಬೆಂಗಳೂರು ಬಿಟ್ಟೆ, ನಿಮ್ಮೂರಿಗೆ ಬರುವ ಹೊತ್ತಿಗೆ ಇಷ್ಟೊತ್ತಾಯಿತು. ನನ್ನ ಕಾರಲ್ಲೇ ಬಂದಿದ್ದೇನೆ'' ಶಾಲ್ಮಲಿ ಸಹ ಸಣ್ಣ ಧ್ವನಿಯಲ್ಲೇ ಉತ್ತರಿಸಿದಳು. ''ಏನಾದ್ರೂ ಹೊಟ್ಟೆಗ್ಹಾ ಕೊಂಡಿದಿಯೋ ಇಲ್ವೋ'' ಮನೆಯ ಹಿರಿಜೀವ ಆದರೆ ಈಗ ಅತಿ ಪರಾಧೀನವಾಗಿರುವ ಜೀವ ಪ್ರಶ್ನಿಸಿತು. ಆರು ಗಂಡು ಮಕ್ಕಳನ್ನೂ ಮೂರು ಹೆಣ್ಣುಗಳನ್ನೂ ಹಡೆದು, ಸಾಕಿ, ಇಪ್ಪತ್ತೆರಡು ಮೊಮ್ಮಕ್ಕಳನ್ನೂ ಮೂವತ್ತಕ್ಕೂ ಹೆಚ್ಚು ಮರಿಮಕ್ಕಳನ್ನು ಕಂಡು ಹೊತ್ತು ಹೊತ್ತಿಗೆ ನೆತ್ತಿಗೆ ನೀರು ಹೊಟ್ಟೆಗೆ ತುತ್ತು ನೀಡಿರುವ ಜೀವ ಅದು ಎನ್ನುವುದನ್ನು ಬಲ್ಲ ಶಾಲ್ಮಲಿ ಕಟ್ಟಿಗೆಯಂಥ ಅಜ್ಜಿಯ ಕೈಗಳನ್ನು ಮೃದುವಾಗಿ ಸವರಿ ''ಎಲ್ಲಾ ಮುಗಿಸ್ಕೊಂಡೇ ಬಂದೆ'' ಎಂದು ನಸು ನಕ್ಕಳು. ಅಂಬಜ್ಜಿಗೆ ತನ್ನ ಮಗನ ಎಳೆಯ ಪ್ರಾಯದ ನಗುನೆನಪಿಗೆ ಬಂತು, ''ಹೌದು ಈ ಕೂಸು ಥೇಟ್ ತಾತನನ್ನೇ ಹೋಲಿದೆ' ಎಂದುಕೊಂಡರು.

ಶಾಲ್ಮಲಿ, ಅಂಬಜ್ಜಿಯ ಎರಡನೇ ಮಗನ ಮೊಮ್ಮೊಗಳು ಆ ಮಗ ಡೆಲ್ಲಿಯಲ್ಲಿ ನೌಕರಿ ಮಾಡುತ್ತಿದ್ದ. ಅಲ್ಲಿಯದೇ ಒಬ್ಬ ಪಂಜಾಬಿ ಹುಡುಗಿಯನ್ನು ಮದುವೆಯಾದಾಗ ಈ ದೊಡ್ಡ ಹಜಾರದ ಮನೆಯಲ್ಲಿ ಅಷ್ಟೇ ದೊಡ್ಡ ಬಿರುಗಾಳಿ ಬೀಸಿತ್ತು. ಈಗ ಕೇಳುತ್ತಿರುವ ಢಂಕದ ಸದ್ದಿಗಿಂತಾ ವಿಕಾರವಾಗಿತ್ತು ಆಗ ಹೊರಟ ಸದ್ದುಗಳು. ''ನನ್ನ ಭಾಗಕ್ಕೆ ನನ್ನ ಮಗ ಸತ್ತ'' ಘರ್ಜಿಸಿದ್ದರು ಅಂಬಜ್ಜಿಯ ಗಂಡ. ಅಂಬಜ್ಜಿಗೆ ಅವನ ಬದುಕು ಅವನಿಚ್ಛೆ ಎನಿಸಿದರೂ ಅದನ್ನು ಗಟ್ಟಿಯಾಗಿ ಹೇಳುವಂತಿರಲಿಲ್ಲ. ''ನೀನೇ ಮುದ್ದು ಮಾಡಿ ಹಾಳು ಮಾಡಿದ್ದು'' ಮೂತಿ ತಿವಿದರು ಅತ್ತೆ.

'ಕುಲಕ್ಕೆ ಬಿತ್ತು ಕೊಡಲಿ ಕಾವು' ಎಂದೆಲ್ಲ ಹಾರಾಡಿದರು ಮಾವ. ಮನೆಯಲ್ಲಿ ನಾಲ್ಕುದಿನ ಸೀತದ ವಾತಾವರಣ. ಆದರೆ ನಿಜವಾಗಿ ಆ ಮಗ ತನ್ನ ಒಬ್ಬನೇ ಮಗನನ್ನೂ ಮೂರುವರ್ಷದ ಪುಟ್ಟ ಶಾಲ್ಮಲಿಯನ್ನು ಅನಾಥರನ್ನಾಗಿ ಮಾಡಿ ತನ್ನ ಹೆಂಡತಿ ಸೊಸೆಯೊಡನೆ ಅಪಘಾತದಲ್ಲಿ ಸತ್ತೇ ಹೋದಾಗ ಯಾಕೆ ಈ ಮನೆಯ ಮನಸ್ಸುಗಳಿಗೆ ಸೂತಕ ತಗುಲಲಿಲ್ಲ? ನಿಟ್ಟುಸಿರಿಟ್ಟರು ಅಂಬಜ್ಜಿ.

''ಅಜ್ಜಿ ನೀವು ಅಲ್ಲಿ ದೇವರ ಮುಂದೆ ಕುಣಿಯುತ್ತಿದ್ದಾರಲ್ಲ ಅವರ ವಿವರಗಳನ್ನು ಹೇಳುತ್ತಾ ಹೋಗಿ ನಾನು ಬರೆದು ಕೊಳ್ಳುತ್ತೇನೆ'' ಪಿಸುಗುಟ್ಟಿದಳು ಶಾಲ್ಮಲಿ. ನಸುನಕ್ಕಿತು ಅಜ್ಜಿ. ಮರಿಮಗಳ ಸುಂದರ ಬೆರಳುಗಳನ್ನೂ, ಯೌವನ ತುಂಬಿದ ಮುಖವನ್ನೂ, ಕುಂಕುಮವಿಲ್ಲದ ಹಣೆಯನ್ನೂ ಮೊದಲ ಬಾರಿಗೆ ನೋಡಿತು. ತನ್ನ ಉಡಿಯಲ್ಲಿ ಸಿಕ್ಕಿಸಿಕೊಂಡಿದ್ದ ಕಾಗದವನ್ನು ಮೆಲ್ಲನೆ ತೆರೆದು ''ಇದ್ಯಾರು ಬರೆದದ್ದು'' ಎಂದಾಗ ಶಾಲ್ಮಲಿಗೆ ಅಜ್ಜಿಯ ಮುಖದ ನಿರ್ಭಾವ ಕಂಡು ಬೆರಗಾಯಿತು. ''ನನ್ನ ಗಂಡ ಪೀಟರ್ ಅಂತ ಅವನು ಬೆಂಗಳೂರಿನವನು. ಅವನಿಗೆ ಕನ್ನಡ ಚೆನ್ನಾಗಿ ಬರುತ್ತದೆ'' ವಿವರಿಸಿದಳು ಓಹೋ ಎಂಬಂತೆ ನಸುನಕ್ಕರು ಅಂಬಜ್ಜಿ. ''ನೋಡು ಎಲ್ಲರಿಗಿಂತ ಎತ್ತರಕ್ಕೆ ಇದ್ದಾನಲ್ಲ ಅವನು ನನ್ನ ನಾಲ್ಕನೆಯ ಮಗ. ಅವನ ಮೈಮೇಲೆ ದೇವಿ ಬರುತ್ತದೆ. ಯಾಕೆ ಗೊತ್ತ? ಶಾಲ್ಮಲಿಯ ಕಣ್ಣುಗಳು 'ಯಾಕೆ' ಎಂದವು. ಅಜ್ಜಿ ಗಮನಿಸಿ ಮುಂದುವರೆದರು. ''ಜೀವನದಲ್ಲಿ ಮಾಡಬಾರದ್ದನ್ನು ಮಾಡಿದ ಹೆಂಡಕುಡಿದ, ಮಾಂಸತಿಂದ, ಹೆಂಡತಿಯನ್ನು ಬಡಿದ, ಪಾಪ ಎನ್ನುವುದು ಒಳಗೇ ಹೊಟ್ಟೆಯಲ್ಲಿ ಗಡ್ಡೆಯಂತೆ ಗಟ್ಟಿಯಾಗಿ ಬತ್ತುತ್ತದಲ್ಲ ಹೀಗೆ ಕುಣಿದು ಹಗುರ ಮಾಡಿಕೊಳ್ಳುತ್ತಾನೆ'' ನಿಸೂರಾಗಿ ಹೇಳುತ್ತಿದ್ದ ಅಜ್ಜಿಯನ್ನು ಬೆಚ್ಚಿ ನೋಡಿದಳು ಶಾಲ್ಮಲಿ.

ಅಜ್ಜಿ ಮುಂದುವರೆದರು. ನೋಡು ಅಲ್ಲಿ ಕಚ್ಚೆಹಾಕಿ ಸೀರೆಯುಟ್ಟ ಹೆಂಗಸು ಕುಣಿಯುತ್ತಿದ್ದಾಳೆ ಕಂಡ್ಯಾ? ಅವಳು ಸೀತ ನಮ್ಮ ಮನೆ ಅಡಿಗೆ ರಂಗಮ್ಮನ ಮಗಳು. ಈಗವಳಿಗೆ ಅರವತ್ತು ತುಂಬಿದೆ. ಹರೆಯದಲ್ಲಿ ಹುಲುಸಾಗಿದ್ದಳು. ಅಮ್ಮ ನಮ್ಮ ಅಡಿಗೆ ಮನೆಯಲ್ಲಿ ಅಪ್ಪ ವಾರ ಅರಳಿಕಟ್ಟೆಯ ಮೇಲೆ ಇಸ್ಪೀಟಾಟದಲ್ಲಿ ಇವಳೂ ಬೇಲಿಯಿಲ್ಲದ ಹೊಲ. ಏನೋ ಅನಾಹುತ ಮಾಡಿಕೊಂಡಳು. ನಿಂತ ಪೆಟ್ಟಿನ ಮೇಲೆ ಆ ಮಂಕು ವೆಂಕಣ್ಣನ ಕೊರಳಿಗೆ ಕಟ್ಟಿದರು. ಮೈತುಂಬಾ ಹರೆಯ ಹರಿದಾಡ್‌ತಿತ್ತು. ತಿನ್ನೊದು ನಿದ್ದೆಮಾಡೋದ್ ಬಿಟ್ರೆ ವೆಂಕಂಗೆ ಇನ್ನೊಂದ್ ಗೊತ್ತಿಲ್ಲ. ಪಾಪ ಸೀತನ ಪಾಡು ಯಾರಿಗೂ ಬೇಡ. ಎಳೆದೆಳೆದು ಕಚ್ಚೆಹಾಕಿ ಸೀರೆ ಉಡ್‌ತಿದ್ಲು, ತೊಡೆಯಿಂದ ಕುತ್ತಿಗೆ ತನ್ನ ಇಡೀ ದೇಹ ಎರಡಾಗಿ ಸೀಳಿಹೋಗೋಹಾಗೆ. ಪಾಪ ಶರೀರದ ದಾಹನ ನುಂಗೇನುಂಗಿದ್ಲು, ಈಗ ನೋಡು ಹೇಗೆ ಕುಣೀತಿದಾಳೆ ಎಲ್ಲಾ ಕಳ್ಕೊಂಡು?

ಆ ಕಡೆ ಕುಣೀತಿದಾನಲ್ಲ ಅವನು ನಿಮ್ಮ ಮುತ್ತಾತನ ತಂಗಿ ಮೊಮ್ಮಗ. ಅಲ್ಲಿ ಪಕ್ಕದಲ್ಲಿ ಅವನ ಜೊತೆಗೇ ಬರ್‍ತಿದಾಳೆ ನೋಡು ಅವಳು ಅವನ ಹೆಂಡ್ತಿ. ಅವನ ಮೈಮೇಲೆ ಅಂಬಾಭವಾನಿ ಇರೋವರ್‍ಗೆ ಮಾತ್ರ ಅವನ ಹಿಂದೆ, ಅವನ್ ಹೇಳಿದ್ಹಂಗ್ ಕೇಳ್ತಾ ಬರ್‍ತಾಳೆ, ಆಮೇಲಿಂದ ಅವನನ್ನ ಬುಗರಿ ಥರಾ ಆಡಿಸ್ತಾಳೆ ''ಎಲ್ಲಿ ಈ ಕಡೆ ಬನ್ನಿ ಎಲ್ರೂ, ನಮಸ್ಕಾರ ಮಾಡೀ ರಾಮಣ್ಣ ಎಲ್ಲಿ ಅವನ್ಹೆಂಡ್ತಿ ಎಲ್ಲಿ? ರಾಮ ಎಲ್ಲಿ, ನರಸಿಂಹ ಎಲ್ಲಿ'' ಎಂದು ಅಜ್ಜಿಯ ಗಂಡುಮಕ್ಕಳ, ಸೊಸೆಯರೆಲ್ಲ ಹೆಸರನ್ನು ಕರೆಯುತ್ತಾ ಏಕವಚನದಲ್ಲಿ ಬೆದರಿಕೆ ಹಾಕುತ್ತಾ ಒಂದು ತರುಣಿ ಸ್ವಲ್ಪ ಉಗ್ರವಾಗಿಯೇ ಜಡೆಯನ್ನು ಕುಣಿಸುತ್ತಾ ಕುಣಿದಾಡುತ್ತಿತ್ತು. ಶಾಲ್ಮಲಿಗೆ ಸ್ವಲ್ಪ ಕುತೂಹಲ ''ಇರಿ ಅಜ್ಜಿ ಬಂದೆ'' ಎಂದ್ ಆ ಹುಡುಗಿಯ ಹತ್ತಿರ ಹೋದಳು, ಅಜ್ಜಿಯ ಮಕ್ಕಳೂ ಸೊಸೆಯರೂ, ಹೆಣ್ಣು ಮಕ್ಕಳೂ ಅಳಿಯಂದಿರೂ ಸರದಿಯಂತೆ ಆ ಹೆಣ್ಣಿಗೆ ನಮಸ್ಕರಿಸಿ ಬರುತ್ತಿದ್ದರು. ಅರೆಗಣ್ಣುಮುಚ್ಚಿ ಕುಣಿಯುತ್ತಿದ್ದ ಆಕೆ ಎಲ್ಲರ ಹಣೆಗೆ ಕರಾರುವಕ್ಕಾಗಿ ಭಂಡಾರ ಬಳೆಯುತ್ತಿದ್ದಳು. ಆಕೆಯ ಎರಡೂ ಕೈಗಳು ಅರಿಶಿಣ ಕುಂಕುಮಗಳಿಂದ ತುಂಬಿಹೋಗಿತ್ತು. ನೆಲದ ಮೇಲೆಲ್ಲಾ ಚೆಲ್ಲಿ ಅದರ ಮೇಲೆ ಕುಣಿದು ಎರಡೂ ಬಣ್ಣ ಸೇರಿ ಕೇಸರಿಬಣ್ಣದ ಮತ್ತೊಂದು ಮಿಶ್ರಣವಾಗಿ, ಎಲ್ಲರ ಕಾಲಿಗೆ ಮೆತ್ತಿಕೊಳ್ಳುತ್ತಿತ್ತು. ಶಾಲ್ಮಲಿ ಮತ್ತೆ ಮುತ್ತಜ್ಜಿಯ ಬಳಿ ಬಂದಳು. ಅಜ್ಜಿ ಅವಳ ಬಗ್ಗೆ ಹೇಳಲು ತೊಡಗಿದರು.

''ಅವಳು ರಂಗು ಅಂತ. ಅದೇ ಆ ಕಚ್ಚೆಸೀರೆ ಸೀತಾಬಾಯಿ ಇದಾಳೆ ನೋಡು ಅವಳ ಮಗಳು. ನಮ್ಮ ಅಡಿಗೆ ರಾಧಮ್ಮ ಸತ್ತ ಮೇಲೆ ಇವಳನ್ನೇ ಈ ಊರಿನ ಜನ 'ರಂಗು' ಅಂತ ಕರೀತಾರೆ. ಪಾಪಕಣೆ. ಅದಕ್ಕೆ ಏನಾದ್ರೂ ಮಾಡಿ ಈ ನಮ್ಮನೆ ದೊಡ್ ಮನೆ ಸೊಸೆ ಆಗಬೇಕೂಂತ ಆಸೆ. ನಮ್ಮ ಮನೆ ಗಂಡುಗಳನ್ನು ನಾಚಿಕೆಬಿಟ್ ಕೇಳಿಕೊಂಡ್ಳು. ನಮ್ಮ ಜಮೀನ್‌ದಾರ್ ರಕ್ತದವ್ ಒಪ್ತಾವೆಯೇ? ಕಜ್ಜನಾಯಿನ ಅಟ್ಟಿದಹಾಗೆ ಅಟ್ಟಿದವು. ನಮ್ಮನೇಲಿ ಅವಳೊಂದು ಗಾದೆಮಾತಾಗಿ ಉಳಿದಿದಾಳೆ. ಯಾವುದಾದರೂ ಗಂಡು ಸರಿಯಾಗಿ ಓದ್ಲಿಲ್ಲಾಂದ್ರೆ ಅಮ್ಮಂದಿರು ಹೆದ್ರಿಸ್ತಾರೆ ''ಓದ್‌ಬೇಡ ಯಾರೂ ಹೆಣ್‌ಕೊಡಲ್ಲ ಕಡೇಗೆ ರಂಗುನೇ ಗತಿ'' ಅಂತ.

ಶಾಲ್ಮಲಿಗೆ ಅಲ್ಲಿಸುತ್ತುತ್ತಿದ್ದ ಪ್ರತಿಜೀವದ ಜೊತೆಯೂ ಅವರ ಗತ ಬದುಕಗಳೂ ಸುತ್ತುತ್ತಿವೆ ಎನಿಸಿತು. ಆ ಇಡೀ ಹಜಾರವೇ ಚೈತನ್ಯ ಪೂರ್ಣವಾಗಿ ಸುತ್ತುತ್ತಿತ್ತು. ಮಧ್ಯೆ ಕುಳಿತ ಅಂಬಾ

ಭವನಿಯ ಮೂರ್ತಿಯೊಂದನ್ನು ಉಳಿದು. ಎಲ್ಲವನ್ನೂ ನೋಟ್ ಹಾಕುತ್ತಾ ಹೋದಳು. ಢಂಕದವನ ಹತ್ತಿರವೇ ಯದ್ವಾ ತದ್ವಾ ಕುಣಿಯುತ್ತಿದ್ದವ, ಉಳಿದವರಂತೆ ತನ್ಮಯವಾಗಿಲ್ಲ ಎನಿಸುತ್ತಿತ್ತು. ಅವನನ್ನೇ ಗಮನಿಸುತ್ತಾ ಕುಳಿತಳು. ಅವನು ಒಮ್ಮೆ ಎಗರಿ ಕುಣಿಯುತ್ತಿದ್ದ ನಂತರ ತಾನು ಕುಣಿದದ್ದನ್ನು ಯಾರು ಯಾರು ಗಮನಿಸಿದರು ಎಂದು ಸುತ್ತ ನೋಡುತ್ತಿದ್ದ. ಆಗಾಗ್ಗ ತನ್ನ ಸೊಂಟದಲ್ಲಿ ಕಟ್ಟಿದ ಚಿಲ್ಲರೆ ಜಾರಿಹೋಗದ ಹಾಗೆ ಪಂಚೆ ಸರಿ ಮಾಡಿಕೊಳ್ಳುತ್ತಾ ಕುಣಿಯುತ್ತಿದ್ದ. ಶಾಲ್ಮಲಿ ಅಂಬಜ್ಜಿಯನ್ನು ಕೇಳಿದಳು ಅವನ ಬಗ್ಗೆ. ''ಗೊತ್ತಿಲ್ಲಮ್ಮ ಯಾರೋ ಹೊಸಬರಂತೆ ಈ ಊರಿಗೆ' ಎಂದರು.

ಕುಣಿತ, ಢಂಕ, ಹಾಡಿನ ರೂಪದ ಕಥೆ, ಎಲ್ಲ ತಾರಕ್ಕೇರಿತು ಅಂಬಜ್ಜಿ ಮೆಟ್ಟಿಲ ಮೇಲೆ ನಿಂತು ''ಶಾಲು ಸ್ವಲ್ಪ ಮೇಲೆ ಹೋಗೋಣ ಬಾ'' ಎಂದರು. ಶಾಲ್ಮಲಿ ಮರು ಮಾತಿಲ್ಲದೆ ಮೇಲೆ ಹೋದಳು. 94ರ ಅಜ್ಜಿಯನ್ನು ನೋಡುವುದೇ ಖುಷಿ ಅವಳಿಗೆ. ತಮ್ಮಮ್ಮ, ಅಜ್ಜಿ, ತಾತ ಸತ್ತಾಗ ಅಖಂಡ ಹತ್ತು ವರುಷ ತಮ್ಮ ಮಡಿಲಲ್ಲಿ ಮುಚ್ಚಿಟ್ಟುಕೊಂಡು ಸಾಕಿದ್ದು ಈ ಅಜ್ಜಿ ಎನ್ನುವುದು ನೆನಪಾದಾಗ ಎದೆ ಭಾರವಾಗುತ್ತದೇ. ಅಜ್ಜಿ ಈಗ ಸವೆದು ಹೋಗಿದ್ದಾರೆ ಆದರೂ ಅದೆಂಥ • ಚುರುಕಿದೆ ಈ ದೇಹದಲ್ಲಿ?

''ಶಾಲು'' ಅವಳ ಚಿಂತನೆಯ ಮೂರ್ತ ಸ್ವರೂಪ ಎದುರು ನಿಂತುಕೇಳಿತು ''ನೀ ಏನ್ ನಿಶ್ಚಯ ಮಾಡ್ದಿ?'' ಅಜ್ಜಿಯ ಮುಖದಲ್ಲಿ ಅದೇ ನಿರಾಳ. ಶಾಲು ಬೆಚ್ಚಿದಳು. ಅನಿಶ್ಚಯದ ನಾಳೆಗಳು ಅಜ್ಜಿಯನ್ನು ಕಂದಿಸಿಲ್ಲ ಕುಂದಿಸಿಲ್ಲ. ಅವರು ಮಕ್ಕಳನ್ನು ಬಿಟ್ಟಿದ್ದಾರೆ ಮೊಮ್ಮಕ್ಕಳನ್ನು ಬಿಟ್ಟಿದ್ದಾರೆ ಮರಿಮಕ್ಕಳ ಕೈ ಹಿಡಿದು ಉಳಿದ ಬದುಕನ್ನೂ ನಡೆಸುವ ಸನ್ನಾಹ! ಭಲೆ ಅಜ್ಜಿ ಎನಿಸಿತು, ''ಅಜ್ಜಿ ಸುಧಾಕರ ನೀವ್ ಹೇಳಿದ್ದೆಲ್ಲ ಹೇಳಿದ. ಅದಕ್ಕೇನಾ ಕಾಗದ ಬರೆಸಿ ಬಂದಿದೀನಿ ಇವತ್ತು. ನಾನಿಮ್ಮನ್ನ ಕೈಯಲ್ಲಿರೋ ಕೂಸ್ ಥರ ನೋಡ್ಕೋತೀನಿ. ನಿಮ್ಮ ಮಕ್ಕಳು ನಿಮ್ಮನ್ನ ಕಾಲಿನ ಚೆಂಡ್ ಮಾಡ್ಕೊಂಡಿದಾರೆ ಈ ವಯಸ್ಸಲ್ಲಿ ತುತ್ತು ಅನ್ನಕ್ಕೆ ನಿಮ್ಮ ಗಂಟು ಕಟ್ಕೊಂಡ್ ಒಬ್ಬೊಬ್ರ ಮನೇಲಿ ಎರೆಡೆರಡ್ ತಿಂಗಳು ಇರ್ಬೇಕಾ? ಈ ವ್ಯವಸ್ಥೆ ಮಾಡಿದವರಿಗೆ ತಲೆ ಇಲ್ಲ. ಆದ್ರೆ ಅಜ್ಜಿ ನಾ ನಿಮ್ಮನ್ನ ಕರ್ಕೊಂಡ್ ಹೋದೇಂತ ನಿಮ್ಮ ಮಕ್ಕಳು ಯಾರೂ ನನ್ನ ಬಯ್ಯಕೂಡದು.''

ಶಾಲ್ಮಲಿಯ ಮುಖ ಬಿರುಸಾಗಿತ್ತು. ಎದೆ ಏರಿಳಿಯುತ್ತಿತ್ತು, ಕಣ್ಣುಗಳಲ್ಲಿ ಕ್ರೋಧವಿತ್ತು. ಅಜ್ಜಿಗೆ ಅವಳನ್ನು ಕಂಡು ನಗು ಬಂತು. ''ಅಲ್ಲೇ ಹುಚ್ಚಮ್ಮಾ ನನ್ನ ಮಕ್ಕಳು ನಿನ್ಯಾಕೆ ಬಯ್ತಾರೆ? ಅವರ್‌ಗೀಗ ನಾನು ಬೇಡ ತಿಳೀತಾ. ಈ ದೊಡ್ ಮನೆ ಮಾರಾಟ ಆಗಿದೆ ಇದ್ರಿಂದ ಬಂದ ಹಣಾನ ಅವರು ಹಂಚ್ಕೊಂಡೂ ಆಯ್ತು. ನಾನೇ ಒಬ್ಬಳು ಹಂಚ್ಕೊಳೊಕೆ ಉಳಿದರೋಳು. ಆದ್ರೆ ಇಷ್ಟ ಇಲ್ಲ. ಇಂಥಾದ್ರಲ್ಲಿ ಬಯ್ತಾರೆ ಅಂತೀಯಲ್ಲೇ ಕೂಸು. ನಿನ್ನ ಬಯ್ಯೋ ಅಷ್ಟು ಪ್ರೀತೀನೂ ಅಲ್ಲಿ ಉಳಿದಿಲ್ವೆ.''

''ಹಾಗಲ್ಲ ಅಜ್ಜಿ'' ಎಂದು ಏನೋ ಹೇಳಲು ಹೋದವಳು ಸುಮ್ಮನಾದಳು. ಇವಳ ಮೌನ ಕಂಡು ಅಜ್ಜಿಗೆ ಮೊದಲ ಬಾರಿಗೆ ಆತಂಕವಾಯಿತು. ಅವರು ತಮ್ಮ ಬೋಳು ತಲೆಯ ಸೆರಗನ್ನು ಸರಿಮಾಡಿಕೊಂಡು ಮೆಲ್ಲಗೆ ಕೆಳಗೆ ಕುಳಿತು ಶಾಲ್ಮಲಿಗೂ ಕುಳಿತುಕೊಳ್ಳಲು ಹೇಳಿದರು. ಈ ಅಟ್ಟದ ಕತ್ತಲು, ಮೌನ, ಕೆಳಗಿನ ಢಂಕ ನಿಧಾನ ನಿಧಾನವಾಗುತ್ತಿದ್ದು ನಿಂತೇ ಹೋಗಿಬಿಡ ಬಹುದು ಎನ್ನಿಸಿದ ಭಾವ, ಎಲ್ಲವೂ ಶಾಲ್ಮಲಿಗೆ ವಿಷಾದ ತುಂಬುವ ಹವಣಿಕೆಯಲ್ಲಿದ್ದವು. ''ನಾ ನಿನ್ನ ಮನೀಗ್ ಬಂದ್ರೆ ನಿಂಗ್ ತೊಂದ್ರೆನಾ'' ಅಜ್ಜಿಯ ಬುಲೆಟ್ ಶಾಟ್‌ನಂಥ ಪ್ರಶ್ನೆ ಶಾಲ್ಮಲಿಗೆ ನಾಚಿಕೆ ತಂದಿತು. ''ಛೇ ಛೇ ನೀವ್ಯಾಕೆ ಹಾಗೆ ಅಂದ್ಕೋತೀರಿ ಅಜ್ಜಿ. ನಿಮ್ಮ ಮಡಿ ನಮ್ಮನೆಯಲ್ಲಿ ನಡೆಯತ್ತೋ ಇಲ್ವೋಂತ ಅಜ್ಜಿ ಶಾಲ್ಮಲಿಯ ಮಾತುಗಳನ್ನು ಮುಂದುವರೆಸಲು ಬಿಡದೇ ತಟ್ಟನೆ ಹೇಳಿದರು. ಇಗೋ ಈ ಘಳಿಗೆಯಿಂದಾನೆ ನಾ ಮಡಿ ಬಿಡ್ಲಿಕ್ ತಯಾರು. ಅಲ್ಲೇ ಕೂಸು ಮನಸ್ಸಿಗೆ ನಿರಾಳ ಇದ್ದಾಗ ಈ ಮಡಿಹುಡಿ ಎಲ್ಲ. ಅದೇ ಇಲ್ದಾಗ ಇದನ್ನ ಕಟ್ಕೊಂಡ್ ಏನ್ ಮಾಡ್ಲಿ ಹೇಳು'' ಶಾಲ್ಮಲಿಗೆ ನಿಜವಾಗಿಯೂ ನೆಮ್ಮದಿಯಾಯಿತು.

ಕೆಳಗೆ ಎಲ್ಲ ಕಲಾಪಗಳೂ ಮುಗಿದು, ಪೂಜೆಯಾದ ಮೇಲೆ ಕಸಬರಿಗೆಯಲ್ಲಿ ಗುಡಿಸಬಾರದೆಂದು, ಅದರಲ್ಲೂ ಅಲ್ಲಿ ಚೆಲ್ಲಾಡಿದ್ದು ಭಂಡಾರವಾದ್ದರಿಂದ ಅದನ್ನು ಬಟ್ಟೆಗಳಲ್ಲಿ ಬಳಿಯುತ್ತಾ ನೆಲಕ್ಲೀನ್ ಮಾಡುತ್ತಿದ್ದರು. ಶಾಲ್ಮಲಿ ಅಜ್ಜಿಗೆ ಎಲ್ಲ ಭರವಸೆಗಳನ್ನು ನೀಡಿ ಕೆಳಗೆ ಕರೆದುಕೊಂಡು ಬಂದಳು. ಅಲ್ಲಿದ್ದ ಎಲ್ಲರ ಮುಖಕ್ಕೆ ಬಟ್ಟೆಗಳಿಗೆ ಧಾರಾಳ ಅರಿಶಿಣ ಕುಂಕುಮದ ಸಿಂಚನವಾಗಿತ್ತು. ಪ್ರತಿಯೊಬ್ಬರ ಮುಖಕ್ಕೂ ಚಿತ್ರವಿಚಿತ್ರ ಶೋಭೆಗಳನ್ನು ತಂದಿತ್ತು. ಶಾಲ್ಮಲಿ ಮೌನವಾಗಿ ಎಲ್ಲರನ್ನೂ ನೋಡುತ್ತಾ ನಿಂತಳು. ಯಾರೋ ಅಜ್ಜಿಗೆ ಹೇಳಿದರು ''ಅಜ್ಜಿ ನೀವಿನ್ ಮಡಿ ಉಟ್ಕೊಳ್ಳಿ ನಿಮಗೆ ಒಳಗೆ ಎಲೆ ಹಾಕಿದೆ ಮಡಿಯವರಿಗೆಲ್ಲ ಅಲ್ಲಿ.''

ಅಂಬಜ್ಜಿ ಶಾಲ್ಮಲಿಗೆ ಮಾತ್ರ ಕೇಳಿಸುವಂತೆ ಪಿಸುಗುಟ್ಟಿದರು. ''ಇವತ್ತೇ ಕೊನೆ ಮಡಿ ಊಟ, ಕೊನೇ ಊಟ ಈ ಮನೇಲಿ'' ಅಜ್ಜಿ ಮುಖದಲ್ಲಿದ್ದ ನಿರ್ಮಲ ನಗುವಿಗೆ ಬೆರಗಾದಳು ಶಾಲ್ಮಲಿ ತನ್ನ ಒಂಬತ್ತನೇ ವಯಸ್ಸಿನಲ್ಲಿ ಮದುವೆಯಾಗಿ ಹದಿನಾಲ್ಕನೇ

ವಯಸ್ಸಿಗೆ ಮೈನೆರೆದು ಈ ಮನೆಯ ಹೊಸ್ತಿಲ ಅಕ್ಕಿಯನ್ನು ಒದ್ದು ಆಗ ಚೆಲ್ಲಿದ ಅಕ್ಷಯ ಸಂಪತ್ತಿನಂತೇ ಈ ವಂಶದ ಸಂತಾನ ಸಂಪತ್ತನ್ನು ವೃದ್ಧಿಸಿದ, ಸರಿಯಾಗಿ ಎಂಬತ್ತು ವಸಂತಗಳ ನೋವು ನಲಿವುಗಳನ್ನುಂಡ ಈ ದೊಡ್ಡ ಮನೆಯ ಒಡತಿ, ಯಾವ ಉದ್ವೇಗವಿಲ್ಲದೆ ಕೊಳೆಯಾದ ಅಂಗಿಯನ್ನು ಕಳಚಿಬಿಡುವಂತ 'ಈ ಮನೆಯ ಕೊನೆಯೂಟಕ್ಕೆ' ಸಿದ್ಧವಾದದ್ದನ್ನು ಅರಗಿಸಿಕೊಳ್ಳ ಲಾಗಲಿಲ್ಲ ಶಾಲ್ಮಲಿಗೆ. 'ಛೂ ತಾನು ಭಾವುಕಳಾಗಬಾರದು' ಹತ್ತಾರು ಸಲ ಮನಸ್ಸಿಗೆ ಎಚ್ಚರಿಸಿದ್ದಳು. ಆದರೂ ಕಣ್ಣಂಚಿನಲ್ಲಿ ಒಂದು ಹನಿನೀರು ತುಂಟ ಮಗು ಮನೆ ಹೊರಗೆ ಓಡುವಂತೆ ಕಣ್ಣಿಂದ ಜಾರಿಯೇ ಬಿಟ್ಟಿತು.

ಅಲ್ಲಿದ್ದ ಸಕಲ ಜೀವಗಳಿಗೂ ಶಾಲ್ಮಲಿಯ ಬಗ್ಗೆ ತಿಳಿದಿತ್ತು. ಆದರೂ ಏನೂ ಗೊತ್ತಿಲ್ಲದವರ ಹಾಗೆ ಸೋಗು ಹಾಕುತ್ತಾ ಓಡಾಡುತ್ತಿದ್ದರು. ಯುವ ಪೀಳಿಗೆಗೆ ಒಂದಿಷ್ಟು ಕುತೂಹಲವಿತ್ತು. ಏಕೆಂದರೆ ಹಿರಿಯರು ಶಾಲ್ಮಲಿಯ ಬಗ್ಗೆ ರಂಗುರಂಗಿನ ಕಥೆಗಳನ್ನು ಹೇಳಿದ್ದರು. ಅಜ್ಜಿಯ ಎರಡನೇಯ ಮಗ ಪಂಜಾಬಿಯನ್ನೂ, ಅವನ ಮಗ ಪಾರಸಿ ಹುಡುಗಿಯನ್ನು ಮದುವೆಯಾದದ್ದು. ಅವಳಜ್ಜ ಅಜ್ಜಿ ತಾಯಿ ಅಪಘಾತದಲ್ಲಿ ತೀರಿದ್ದು ಅಂಬಜ್ಜಿಯೇ ದೆಹಲಿಯಲ್ಲಿ ಹತ್ತು ವರ್ಷ ನೆಲೆಸಿ ಮೊಮ್ಮಗನ ಈ ಮಗಳನ್ನು ಬೆಳೆಸಿ ಕೊಟ್ಟಿದ್ದು, ಈ ಏಕಮಾತ್ರ ಸುಪುತ್ರಿಗಿರುವ ಕೋಟಿ ಕೋಟಿಯ ಆಸ್ತಿ, ಅವಳು ಎಂ.ಎಸ್.ಸಿ ಪಿ.ಎಚ್.ಡಿ. ಮಾಡಿದ್ದು ಈಗಲೂ ಮಾತ್ರ ಆರಾಧನೆಯ ಬಗ್ಗೆ ಸಂಶೋಧನೆ ಮಾಡುತ್ತಿರುವುದು, ಕ್ರಿಶ್ಚಿಯನ್ನನನ್ನೂ ಮದುವೆ ಯಾದದ್ದು, ಒಂದೇ ಎರಡೇ ಸುದ್ದಿಗಳು! ಕಿವಿ ತುಂಬುವಷ್ಟು!! ಬುದ್ಧಿಗೆ ನಿಲುಕದಷ್ಟು!!!

ಎಲೆ ಹಾಕುವ ಕೆಲಸ ಮುಗಿದು ಬಡಿಸುವಿಕೆ ಪ್ರಾರಂಭ ವಾಗಿತ್ತು. ಚಿಕ್ಕ ಮಕ್ಕಳು ಕೆಲವರು ದೊಡ್ಡವರ ಅರಳು ಕಣ್ಣುಗಳಿಗೆ ಹೆದರದೆ ಶಾಲ್ಮಲಿಯನ್ನು ಮಾತನಾಡಿಸಿದ್ದವು. ಅವರಿಂದ ಸ್ಫೂರ್ತಿ ಪಡೆದ ಕೆಲವು ತರುಣರೂ ಬಂದು ಶಾಲ್ಮಲಿಗೆ ಹಲೋ ಹೇಳಿಯಾಗಿತ್ತು. ಸದಾನಂದ ಮಾತ್ರ ಬೇರೆಯವರು ಹೊಟ್ಟೆ ಕಿಚ್ಚು ಪಡುವಷ್ಟು ಶಾಲ್ಮಲಿಯೊಂದಿಗೆ ಹರಟುತ್ತಿದ್ದ. ಅವನು ಅಂಬಜ್ಜಿ ಮರಿಮಕ್ಕಳ ಪೈಕಿ ಪ್ರೀತಿ ಪಾತ್ರ. ಕೆಲವೇ ದಿನಗಳ ಹಿಂದೆ ಬೆಂಗಳೂರಿನಲ್ಲಿ ಶಾಲ್ಮಲಿಯ ಮನೆ ಹುಡುಕಿ ಅವಳಿಗೆ ಅಂಬಜ್ಜಿಯ ಸಂದೇಶ ಮುಟ್ಟಿಸಿ ಬಂದವನು.

ಹಿರಿಯರಿಗೆ ಶಾಲ್ಮಲಿಯನ್ನು ಊಟಕ್ಕೆಲ್ಲಿ ಕೂಡಿಸುವುದೆಂದು ದ್ವಂದ್ವ ಶುರುವಾಯಿತು. ಹೇಳಿ ಕೇಳಿ ಮೂರು ಬೇರೆ ಬೇರೆ ಜಾತಿ ಸಂಕರದ ಹುಡುಗಿ. ಇಂದೋ ಮನೆಯಲ್ಲಿ ಅಂಬಜ್ಜಿಯ ಹಿರಿಯ ಮಗನ ಮೊಮ್ಮಗನ ಮದುವೆಯ ನಂತರ ನಡೆಯುವ ಕುಲದೇವತೆ ಪೂಜೆ 'ಗೊಂದಲ' ನಡೆದಿದೆ. ಹತ್ತಾರು ಜನರ ಮೈ ಮೇಲೆ ದೇವಿ ಬಂದು ಈ ವಂಶ ಉದ್ಧಾರವಾಗುವುದೆಂದು ಹರಸಿ ಹೋಗಿದ್ದಾಳೆ. ಅಂಬಜ್ಜಿಯ ಗಂಡನೇ ತನ್ನ ಎರಡನೇ ಮಗ ತನ್ನ ಪಾಲಿಗೆ ಸತ್ತನೆಂದು ಘೋಷಿಸಿ ತಾನು ಸಾಯುವಾಗಲೂ ಅವನ ಹೆಸರನ್ನೂ ನೆನೆಯದೇ ಸತ್ತಿರುವಾಗ ಅವನ ವಂಶವಾಹಿನಿ ಹೇಳದೇ ಕೇಳದೇ ಇಂದು ಇಲ್ಲಿ ಪ್ರತ್ಯಕ್ಷವಾದರೆ ಅದನ್ನು ಸ್ವೀಕರಿಸುವುದು ಹೇಗೆ? ಕೊನೆಗೆ ಒಳಗೊಳಗೇ ನಿರ್ಧಾರ ವಾದಂತೆ ವರಾಂಡಾದಲ್ಲಿ ಮಕ್ಕಳ ಜೊತೆಯಲ್ಲಿ ಅವಳಿಗೊಂದು ಎಲೆ ಸಿದ್ಧವಾಯಿತು.

ಊಟ ಮುಗಿದು ಎಲೆ ಗೋಮಯವಾಗುತ್ತಿದ್ದಾಗ ಅದನ್ನು ನೋಡುತ್ತಾ ನಿಂತ ಶಾಲ್ಮಲಿಯ ಮನದಲ್ಲಿ ತುಮುಲ ಪ್ರಾರಂಭವಾಯಿತು. ಇನ್ನೂ ಕೆಲವೇ ಕ್ಷಣಗಳಲ್ಲಿ ಈ ಮನೆಯಲ್ಲಿ ಒಂದು ಸುದ್ದಿ ಸ್ಫೋಟಗೊಳ್ಳಲಿದೆ. ಅಜ್ಜಿ ಹೇಳುತ್ತಾರೆ ''ನಾನು ನಿಮ್ಮೆಲ್ಲರ ಬದುಕಿನಿಂದ ದೂರ ಹೋಗುತ್ತಿದ್ದೇನೆ ಶಾಲ್ಮಲಿಯ ಮನೆಗೆ'' ಯಾರ ಯಾರ ಅಹಂಕಾರಗಳು ಹೇಗೆ ಹೇಗೆ ವರ್ತಿಸುತ್ತವೆಯೋ ಯಾರು ಬಲ್ಲರು? 'ಮಡಿ' ಎನ್ನುವ ಪೆಡಂಭೂತ ತನ್ನ ಅಜ್ಜಿಯ ನಡುವೆ ನಿಂತರೆ ಹೇಗೆ ನಿವಾರಿಸಲಿ? ಬೆಂಗಳೂರಿನಿಂದ ಹೊರಟಾಗ ಇದ್ದ ದೃಢತೆ ಏಕೆ ಕುಸಿಯುತ್ತಿದೆ? ಛೇ ಪೀಟರ್‌ನನ್ನೂ ಜೊತೆಯಲ್ಲಿ ಕರೆತರಬೇಕಿತ್ತು. ಆದರೆ ಅವನೋ ದೃಢವಾಗಿ ನಿರಾಕರಿಸಿದ್ದ. ''ನೋಡು ನೀನು ಹೆಣ್ಣೆಂದೋ, ಅಥವಾ ಅವರದೇ ವಂಶದ ಕುಡಿಯೆಂದೋ ನಿನ್ನನ್ನು ಸಹಿಸುತ್ತಾರೆ. ಆದರೆ ನಾನು ಬಂದರೆ ಕೆಲಸಾ ತೀರ ಕೆಟ್ಟು ಹೋಗುತ್ತದೆ'' ಇಲ್ಲಿಯ ವಾತಾವರಣ ಪೀಟರನ ಮಾತುಗಳು ಸತ್ಯವೆಂದೇ ಸಾರುತ್ತಿದ್ದವು.

ಹೀಗೇ ಏನೇನೋ ಯೋಚನೆಯ ಗೂಜುಗಳಲ್ಲಿ ಸಿಕ್ಕವಳನ್ನು ಅಂಬಜ್ಜಿ ಪಕ್ಕದಲ್ಲಿ ನಿಂತು ಎಚ್ಚರಿಸಿದರು. ''ನಡಿ ಹೋಗೋಣ'' ಅಂಬಜ್ಜಿ ಬಿಡುಗಡೆಯ ಭಾವದಲ್ಲಿ ಹೇಳಿದರು ''ಆಂ'' ತೆರೆದ ಬಾಯಿ ಶಾಲ್ಮಲಿಯದು. ''ಎಲ್ಲರಿಗೂ ಹೇಳಿ ಆಯ್ತಾ?'' ಅನುಮಾನ ಪರಿಹಾರವೇ ಆಗಿರಲಿಲ್ಲ ಅವಳಿಗೆ. ಇದೇನಿದು? ಬೆಟ್ಟವನ್ನೂ ಕಡಿದು ಇಲಿ ತೆಗೆದಂತೆ?! ಶಾಲ್ಮಲಿಯ ಗೊಂದಲ ಕಂಡು ನಗು ಅಂಬಜ್ಜಿಗೆ 'ನೀ ನಡಿ ಮಹರಾಯ್ತಿ ಬೇಗ ನಾನು ಕಾರಲ್ಲಿ ಎಲ್ಲ ಹೇಳ್ತೀನಿ'' ಅವಳಿಗಿಂತ ಮೊದಲು ಅಂಬಜ್ಜಿ ದುಡು ದುಡು ನಡೆದೇಬಿಟ್ಟರು. ಕೊಂಕಳಲ್ಲಿ ಪುಟ್ಟ ಗಂಟನ್ನೂ ಇಟ್ಟುಕೊಂಡು.

ಆ ಬಿಳಿಯ ದೊಡ್ಡ ಹಡಗಿನಂಥಾ ವಿದೇಶಿ ಕಾರು ಆ ಓಣಿಯ ಎಲ್ಲರ ಸಣ್ಣ ಕೇಂದ್ರವಾಗಿ ಅಲ್ಲಿ ನಿಂತಿತ್ತು. ದೊಡ್ಡಮನೆಯ ಸಣ್ಣ ಹುಡುಗರಂತೂ ತುಳಸೀಕಟ್ಟೆಗೆ ಪ್ರದಕ್ಷಿಣೆ

ಹಾಕುವಹಾಗೆ ಅದರ ಸುತ್ತ ಹಲವು ಬಾರಿ ಸುತ್ತಿ ಬಂದಿದ್ದರು. ದೊಡ್ಡ ಮನೆಯಲ್ಲಿ ಒಂದೆರಡು ಮಾರುತಿ ವ್ಯಾನು ಕಾರುಗಳಿದ್ದರೂ ಇದರ ಚೆಂದದ ಮುಂದೆ ಅದು ಎತ್ತಿನ ಬಂಡಿಯೆಂದೆನಿಸಿತ್ತು ಮಕ್ಕಳಿಗೆ. ಅಂಬಜ್ಜಿ ಎಷ್ಟೋ ವರ್ಷಗಳಿಂದ ಶಾಲ್ಮಲಿಯ ಕಾರಿನಲ್ಲಿ ಸುತ್ತಿದ ಅನುಭವ ವಿರುವವರಂತೆ, ಕಟ್ಟೆಯ ಮೇಲೆ ನಿಂತ ಜನರ ಮೇಲೇರಿದ ಹುಬ್ಬುಗಳನ್ನು ಒಂದಿಷ್ಟೂ ಲೆಕ್ಕಿಸದೆ ಶಾಲ್ಮಲಿ ಬಾಗಿಲು ತೆರೆದೊಡನೇ ಫ್ರೆಂಟ್ ಸೀಟಿನಲ್ಲಿ ಠಣಕ್ಕನೆ ಕುಳಿತೇ ಬಿಟ್ಟರು.

ದೊಡ್ಡ ಮನೆ ಅದರಲ್ಲಿದ್ದ ಸಕಲ ಜೀವರಾಶಿ, ಪುಟ್ಟ ಅಂಬಾಬಾಯಿ ಅಂಬಜ್ಜಿಯಾದ ಆ ಮನೆಯ ಸಕಲ ಅನುಭವವನ್ನೂ ಹಿಂದೆ ಹಾಕಿ ಶಾಲ್ಮಲಿಯ ವಿದೇಶಿ ಕಾರು ಮೂರು ಹಿಡಿಯಷ್ಟಿದ್ದ ಅಂಬಜ್ಜಿಯ ಸಹಿತ ನಿಶ್ಶಬ್ದವಾಗಿ ಹೊರಟೇ ಬಿಟ್ಟಿತು. ಊರ ಹೊರಗೆ ಬಂದ ಮೇಲೆ ಮೆಲ್ಲನೆ ಕೇಳಿದಳು ಶಾಲ್ಮಲಿ "ಅಲ್ಲ ಎಲ್ಲರಿಗೂ ಏನು ಹೇಳಿ ಬಂದಿರಿ ಅಜ್ಜಿ?'' ಅಂಬಜ್ಜಿಗೋ ಜನ್ಮ ಜನ್ಮಾಂತರಗಳಿಂದ ಬಾಕಿ ಉಳಿದಿದ್ದ ನಿದ್ದೆ ಆವರಿಸಿ ಬಿಟ್ಟಿದೆ ಆದರೂ ಎಚ್ಚರ ಮಾಡಿಕೊಂಡು ಹೇಳಿದರು- ''ಏನಿಲ್ಲ ಕಣೆ ದೊಡ್ಡವನಿಗೆ ಹೇಳಿದೆ ನಾ ನಾಲ್ಕುದಿನ ಶಾಲ್ಮಲಿ ಮನೆಗೆ ಹೋಗ್ತೀನೀಂತ'' ನಿನ್ನಿಷ್ಟ ಅಂದ ಅವ. ಸೀದಾ ಬಂದೆ ನೋಡು. 'ಹಾಗಿದ್ದರೆ ನಿಜವಾಗಿ ಅವರ್‍ಯಾರಿಗೂ ಈ ಅಜ್ಜಿ ಬೇಕಿರಲಿಲ್ಲವೋ' ಕಾಡುವ ಪ್ರಶ್ನೆಯೊಂದಿಗೇ ಸಾಗುತ್ತದೆ ಕಾರು.

## ಉಪಸಂಹಾರ

ಅಂಬಜ್ಜಿ ಶಾಲ್ಮಲಿಯ ಮನೆಗೆ ಬಂದು ಎರಡು ವರ್ಷಗಳು ಕಳೆದಿವೆ. ಕೆಲವು ತಿಂಗಳಿಂದ ಹಾಸಿಗೆ ಹಿಡಿದಿದ್ದಾರೆ ಪೀಟರ್ ಅವರನ್ನು ಮಗುವಿನಂತೆ ಎತ್ತಿ ಸ್ನಾನ ಮಾಡಿಸುತ್ತಾನೆ ಶಾಲ್ಮಲಿ ಊಟ ಮಾಡಿಸುತ್ತಾಳೆ ಎರಡು ವರ್ಷಗಳಿಂದ ತಲೆ ಕೂದಲನ್ನು ಬೋಳಿಸಿಲ್ಲವಾದ್ದರಿಂದ ಅದನ್ನ ಬಾಚಿ ಕಟ್ಟುವ ಕೆಲಸ ಮಾಡುತ್ತಾಳೆ. ಇಂದು ಅಂಬಜ್ಜಿಯ ದೊಡ್ಡ ಮಗನಿಗೆ ಎಂಬತ್ತು ವರ್ಷದ ಸಹಸ್ರ ಚಂದ್ರದರ್ಶನ ಶಾಂತಿ. ಅದರ ಪ್ರಯುಕ್ತ ಮಾತೃ ಆರಾಧನೆಯ ಅಂಗವಾಗಿ 'ಗೊಂದಲ' ನಡೆಯುತ್ತಿದೆ ಊರಲ್ಲಿ. ಕುಲದೇವತೆ ಸಂಪ್ರೀತಿಗೊಳ್ಳುತ್ತಿದ್ದಾಳೆ. ಆ ಸಂಸ್ಕೃತಿಯ ಎಳ್ಳಷ್ಟನ್ನೂ ಅರಿಯದ ಪೀಟರ್ ಹೂವಿನಂತೆ ಅಂಬಜ್ಜಿಯನ್ನು ಎತ್ತಿ ಇಳಿಸಿ, ಸೇವೆ ಮಾಡುತ್ತಿದ್ದಾನೆ. ಇದಕ್ಕಾಗಿ ಅವನೂ ಶಾಲ್ಮಲಿಯೂ ತಮ್ಮ ಸ್ವಂತಮಗುವಿನ ಹುಟ್ಟುವಿಕೆಯನ್ನೇ ಮುಂದೂಡುತ್ತಿದ್ದಾರೆ.



3ನೆಯ ಪುಟದಿಂದ ......

ಸ್ವತಃ ದುಡಿಯದೆ, ವಿವಾಹದ ಮೂಲಕ ಧಿಡೀರ್ ಶ್ರೀಮಂತರಾಗ ಹೊರಟ ಕನಸು, ಹಾಡು ಹಗಲೇ ದುಃಸ್ವಪ್ನ ವಾಗುತ್ತಿರುವುದು ವಿಷಾದದ ಸಂಗತಿ.

ಆರು ಲಕ್ಷ ಖರ್ಚು ಮಾಡಬಲ್ಲಂತಹ ಸ್ಥಿತಿವಂತ ಕುಟುಂಬಕ್ಕೂ ವಿದೇಶೀ ನೆಲದ ಆಸೆ ಇಷ್ಟಿದ್ದರೆ, ಸಾಧಾರಣ ಹಿನ್ನೆಲೆಯ ಕುಟುಂಬಗಳಿಗೆ ಇನ್ನೆಷ್ಟಿರಬೇಕು. ಓದಿದ, ವಿದ್ಯಾವಂತ ಮಧ್ಯಮ ವರ್ಗದ ಕುಟುಂಬ, ಆರು ಲಕ್ಷಗಳಲ್ಲಿ ಭಾರತದಲ್ಲಿ ತಣ್ಣನೆಯ ನೆಮ್ಮದಿಯ ಬದುಕನ್ನು ಕಾಣಲು ಸಾಧ್ಯವಿರಲಿಲ್ಲವೆ, ಒಳ್ಳೆಯ ಹುಡುಗನನ್ನು ಹುಡುಕಲು ಆಗುತ್ತಿರ ಲಿಲ್ಲವೆ - ಎಂಬ ಪ್ರಶ್ನೆಗಳು ಮೂಡುತ್ತವೆ. ಆದರೆ ಬಂಗಾರದ ಜಿಂಕೆ ಬೆನ್ನತ್ತಿದ್ದ ಹುಡುಗಿಯರಿಗಾಗಲಿ, ಅವರ ಅಪ್ಪ-ಅಮ್ಮನಿಗಾಗಲಿ ಇದು ಕಾಣುವುದಿಲ್ಲ. ಇಂದು ಮದುವೆಗಳು ಪ್ರೀತಿ, ಅನುರಾಗದ ಅಡಿಪಾಯದ ಬದಲು, ಧಿಡೀರ್ ಹಣ ಗಳಿಸುವ ವ್ಯಾಪಾರಗಳಾಗಿವೆ. ವಿದೇಶದ ಹುಚ್ಚು ಬಿಡುವವರೆಗೂ ಮೋಸದ ಮದುವೆಗಳು ನಿಲ್ಲುವುದಿಲ್ಲ.

ಸುತ್ತಮುತ್ತಲೇ ಮೋಸದ ಹೇರಳ ಪ್ರಸಂಗಗಳು ಕಂಡರೂ, ಹೆಣ್ಣು ಮಕ್ಕಳ, ಹೆತ್ತವರ ವಿದೇಶಿ ಮೋಹ ಕಿಂಚಿತ್ತೂ ಕುಂದಿಲ್ಲ. ಮುದುಕನಾಗಿರಲಿ, ಓದಿರಲಿ, ಇಲ್ಲದಿರಲಿ, ವಿವಾಹವೇ ಆಗಿರಲಿ, ಏನೊಂದನ್ನೂ ನೋಡಲು ಹೋಗದ ಇವರಿಗೆ, ಎನ್.ಆರ್.ಐ. ವಿವಾಹ ವಿದೇಶಕ್ಕೆ ಹೋಗುವ ಸುಲಭ ಮಾರ್ಗವಾಗಿ ಕಾಣುತ್ತದೆ. ಈ ಪರಿಸ್ಥಿತಿಗೆ ಯಾರನ್ನು ಬೈಯುವುದು? 'ಎನ್.ಆರ್.ಐ. ಗಂಡುಗಳು ಇಲ್ಲಿಯ ಹೆಣ್ಣುಗಳನ್ನು ಶೋಷಿಸುತ್ತಿದ್ದಾರೆ' ಎಂದು ಘೋಷಿಸುವುದು ತಪ್ಪಾಗುತ್ತದೆ. ಕಾರಣ, ಈ ಹುಡುಗಿಯರು ಕಣ್ಣು ಬಿಟ್ಟುಕೊಂಡು ಹೋಗಿ ಹಗಲಲ್ಲೇ ಹಳ್ಳಕ್ಕೆ ಬೀಳುತ್ತಾರೆ. ಪ್ರೀತಿ ಸ್ನೇಹದ ಸಂಬಂಧ, ಸರಳ ಬದುಕ, ಜೊತೆಗೆ ದುಡಿದು ಮೆಲ್ಲನೆ ಮೇಲೇರುವ ನೆಮ್ಮದಿಯ ಬದುಕು ಬಯಸಿದ ಸಮಾಜ ಮತ್ತು ಜೀವನ ಮೌಲ್ಯಗಳು ಮಾಯವಾಗಿದೆ. ಕೊಳ್ಳುಬಾಕ ಸಂಸ್ಕೃತಿಯ ಪ್ರತಿಫಲವಾಗಿ, ಆದಷ್ಟು ಬೇಗ, ಆದಷ್ಟು ವೇಗವಾಗಿ ಶ್ರೀಮಂತರಾಗುವ, ಹೇರಳವಾಗಿ ಹಣ ಮಾಡುವ, ಐಷಾರಾಮದ ಬದುಕಿಗೆ ಧಿಡೀರ್ ದಾರಿಗಳನ್ನು ಹುಡುಕುವುದೇ ಮುಖ್ಯವಾಗಿದೆ. ಈ ಪರದೇಶದ ವಿಪರೀತದ ಮೋಹ ಬದಲಾಗುತ್ತಿರುವ ಜೀವನ ಮೌಲ್ಯಗಳಿಗೆ ಕನ್ನಡಿ ಹಿಡಿಯುತ್ತದೆ. ನಮ್ಮ ಸಮಾಜದಲ್ಲಿ ಮಹಿಳೆಗೆ ವಿವಾಹ ಧಿಡೀರ್ ಶ್ರೀಮಂತಿಕೆಯ ಸುಲಭ ಮಾರ್ಗವಾಗಿ ಕಾಣುತ್ತದೆ. ನಮ್ಮ ಹುಡುಗಿಯರನ್ನು ಮದುವೆಗೆ ತಯಾರಿಸುವ ಬದಲು, ಬದುಕಿಗೆ, ದುಡಿದು ಸಾಧಿಸುವ ಸಾಧಕ ಬದುಕಿಗೆ ತಯಾರಿಸುವುದು ಹೇಗೆ? ಆದರೆ ಇದು ಕೇವಲ ಮಹಿಳೆಯ ಸಮಸ್ಯೆಯಲ್ಲ, ವೇಗವಾಗಿ ಬದಲಾಗುತ್ತಿರುವ ಒಟ್ಟು ಸಮಾಜದ ಸಮಸ್ಯೆ. ಇದಕ್ಕೆ ಉತ್ತರ ಮಹಿಳಾ ಜಾಗೃತಿಯೊಡನೆ, ಒಟ್ಟು ಸಮಾಜದ ಜಾಗೃತಿಯಿಂದ ಮಾತ್ರ ಸಾಧ್ಯ.

# ಸಾಮಾಜಿಕ ನ್ಯಾಯದೊಂದಿಗೆ ಸಮಾನತೆ

## ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ

ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದು ಸಾಮಾಜಿಕವಾಗಿ ಶೋಷಿತರಾದವರ ಅಭಿವೃದ್ಧಿಗಾಗಿ ವಿಶೇಷ ಒತ್ತುಕೊಟ್ಟು ಅವರಿಗೆ ಸಾಮಾಜಿಕ ನ್ಯಾಯ ಒದಗಿಸಿದಲ್ಲಿ ಮಾತ್ರ ಸಮಾನತೆ ಸಾಧಿಸುವುದು ಸಾಧ್ಯ. ಇದು "ಸರ್ವೇಜನಾಃ ಸುಖಿನೋಭವಂತು" ಎಂಬ ಧ್ಯೇಯ ಈಡೇರಿಕೆಗೆ ಕಾರಣವಾಗುವುದು. ದೂರದೃಷ್ಟಿ ನಾಯಕ ಶ್ರೀ ಎಸ್.ಎಂ. ಕೃಷ್ಣ ಅವರ ನೇತೃತ್ವದ ಪ್ರಸ್ತುತ ಸರ್ಕಾರದ ಮಹೋದ್ದೇಶವೇ ಇದು. ಈ ದಿಸೆಯಲ್ಲಿ ಸರ್ಕಾರ ಹಿಂದುಳಿದವರ, ಅಲ್ಪಸಂಖ್ಯಾತರ, ದೀನದಲಿತರ ಹಾಗೂ ಶೋಷಿತರ ಕಲ್ಯಾಣಕ್ಕಾಗಿ ನೂತನ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಗೊಳಿಸುವ ಮೂಲಕ ಅವರಲ್ಲಿ ಹೊಸ ಆಶಾಕಿರಣವನ್ನೇ ಮೂಡಿಸಿದೆ.

ಸಮಾಜ ಕಲ್ಯಾಣ ಇಲಾಖೆ

## ಸಮಾಜ ಕಲ್ಯಾಣ ಇಲಾಖೆ-ಯೋಜನೆಗಳು ಮತ್ತು ಸಾಧನೆಗಳು:

### ಪರಿಶಿಷ್ಟ ಜಾತಿಯವರ ಅಭಿವೃದ್ಧಿ:

ಒಟ್ಟಾರೆ 4,250 ವಿದ್ಯಾರ್ಥಿನಿಲಯ ಸೌಲಭ್ಯ ಒದಗಿಸಲು 45 ವಿದ್ಯಾರ್ಥಿನಿಲಯಗಳ ಸ್ಥಾಪನೆ ಮತ್ತು 50 ಹೊಸ ವಿದ್ಯಾರ್ಥಿನಿಲಯಗಳಿಗೆ ಮಂಜೂರು. ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ಒಟ್ಟು 16,48,391 ವಿದ್ಯಾರ್ಥಿಗಳಿಗೆ ರೂ. 3,032.26 ಲಕ್ಷಗಳ ವಿದ್ಯಾರ್ಥಿ ವೇತನ. 7 ಹೊಸ ಮೊರಾರ್ಜಿ ದೇಸಾಯಿ ಮಾದರಿ ಶಾಲೆಗಳ ಪ್ರಾರಂಭ. ರೂ. 1,556.30 ಲಕ್ಷಗಳ ವೆಚ್ಚದಲ್ಲಿ 73 ವಿದ್ಯಾರ್ಥಿನಿಲಯಗಳ ಕಟ್ಟಡ ನಿರ್ಮಾಣ ಪೂರ್ಣ. 736 ಎಂ.ಫಿಲ್ /ಪಿ.ಎಚ್.ಡಿ ಮಾಡುವವರಿಗೆ ರೂ. 17.49 ಲಕ್ಷಗಳಷ್ಟು ಆರ್ಥಿಕ ನೆರವು. 10ನೇ ಮತ್ತು ಮೇಲ್ಪಟ್ಟ ತರಗತಿಗಳಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದ 7,437 ವಿದ್ಯಾರ್ಥಿಗಳಿಗೆ ರೂ. 44.75 ಲಕ್ಷ ಮೊತ್ತದ ಪ್ರೋತ್ಸಾಹಕ ವಿದ್ಯಾರ್ಥಿ ವೇತನ. ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ 1,01,412 ಬಾಲಕಿಯರಿಗೆ ರೂ. 571.06 ಲಕ್ಷಗಳಷ್ಟು ವಿದ್ಯಾರ್ಥಿ ವೇತನ ನೀಡಿಕೆ. ಅಂತರ್ಜಾತಿ ವಿವಾಹ ಮಾಡಿಕೊಂಡ 485 ದಂಪತಿಗಳಿಗೆ ರೂ. 113.05 ಲಕ್ಷ ಮೊತ್ತದ ಆರ್ಥಿಕ ನೆರವು. ಅಂಬೇಡ್ಕರ್ ವಸತಿ ಕಾರ್ಯಕ್ರಮದಡಿಯಲ್ಲಿ 17,632 ಮತ್ತು ಆಶ್ರಯ ಅಡಿಯಲ್ಲಿ 662 ವಸತಿಗಳ ನಿರ್ಮಾಣ, ಪ್ರಸ್ತುತ ವರ್ಷ ಅಂಬೇಡ್ಕರ್ ವಸತಿ ಯೋಜನೆ ಅಡಿಯಲ್ಲಿ 15,442 ಹೆಚ್ಚುವರಿ ವಸತಿ ನಿರ್ಮಾಣ ಯೋಜನೆ. 500 ವಿದ್ಯಾವಂತ ನಿರುದ್ಯೋಗಿ ಯುವಕರಿಗೆ ವಿವಿಧ ಕ್ಷೇತ್ರಗಳಲ್ಲಿ ತರಬೇತಿ ಮತ್ತು ಈ ವರ್ಷ ಇನ್ನೂ 2,100 ಅಭ್ಯರ್ಥಿಗಳಿಗೆ ತರಬೇತಿ ಒದಗಿಸಲು ಯೋಜನೆ. ವಿವಿಧ ಅಭಿವೃದ್ಧಿ ಇಲಾಖೆಗಳ ವಿಶೇಷ ಘಟಕ ಯೋಜನೆಯಡಿಯಲ್ಲಿ ರೂ. 30,873 ಲಕ್ಷಗಳ ಒಟ್ಟಾರೆ ವೆಚ್ಚದೊಂದಿಗೆ ಒಟ್ಟಾರೆ 1,33,817 ಫಲಾನುಭವಿಗಳಿಗೆ ಆರ್ಥಿಕ ನೆರವು.

### ಪರಿಶಿಷ್ಟ ಪಂಗಡಗಳ ಅಭಿವೃದ್ಧಿ:

7 ವಿದ್ಯಾರ್ಥಿನಿಲಯಗಳನ್ನು ಮತ್ತು 2 ಆಶ್ರಮ ಶಾಲೆಗಳ ಸ್ಥಾಪನೆ, 5 ಹೊಸ ವಿದ್ಯಾರ್ಥಿನಿಲಯಗಳಿಗೆ ಮಂಜೂರು. 5 ರಿಂದ 10ನೇ ತರಗತಿಯವರಿಗಾಗಿ 2 ಹೊಸ ವಸತಿ ಶಾಲೆಗಳ ಪ್ರಾರಂಭ, 4 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು ಮತ್ತು 7 ಆಶ್ರಮ ಶಾಲೆಗಳಿಗೆ ಮಂಜೂರಾತಿ ಪ್ರಕ್ರಿಯೆ. 8 ಆಶ್ರಮ ಶಾಲೆಗಳ ಕಟ್ಟಡ ನಿರ್ಮಾಕ್ಕೆ ಕ್ರಮ. ರೂ 98.00 ಲಕ್ಷ ವೆಚ್ಚ ವಿವಿಧ ಕ್ಷೇತ್ರಗಳ 880 ನಿರುದ್ಯೋಗಿ ಯುವಕರಿಗೆ ತರಬೇತಿ ಪೂರ್ಣ. 3,596 ಅಂಬೇಡ್ಕರ್ ವಸತಿಗಳು ಮತ್ತು 2,967 ಆಶ್ರಯ ವಸತಿಗಳ ನಿರ್ಮಾಣ ಪೂರ್ಣ, ಈ ವರ್ಷ 5000 ಮನೆಗಳ ನಿರ್ಮಾಣದ ಗುರಿ. 5,201 ಆಶ್ರಯ ವಸತಿಗಳ ನಿರ್ಮಾಣಕ್ಕಾಗಿ ರೂ. 520.10 ಲಕ್ಷ ಸಹಾಯಧನ ಬಿಡುಗಡೆ. ಐಟಿಡಿಪಿ ಪ್ರದೇಶಗಳಲ್ಲಿ 5,597 ವಸತಿಗಳನ್ನು ನಿರ್ಮಿಸಲು ರೂ. 319.40 ಲಕ್ಷ ಬಿಡುಗಡೆ. ವಿವಿಧ ಇಲಾಖೆಗಳ ಗಿರಿಜನ ಉಪಯೋಜನೆ ಅಡಿ ರೂ. 7,945 ಲಕ್ಷಗಳ ಒಟ್ಟಾರೆ ವೆಚ್ಚದಲ್ಲಿ 31,235 ಫಲಾನುಭವಿಗಳಿಗೆ ನೆರವು. 5,34,392 ಮೆಟ್ರಿಕ್ ಪೂರ್ವ/ನಂತರದ ವಿದ್ಯಾರ್ಥಿಗಳಿಗೆ ರೂ. 1,341.57 ಲಕ್ಷಗಳ ವಿದ್ಯಾರ್ಥಿ ವೇತನ ವಿತರಣೆ. ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದಿಂದ ರೂ. 5,910.04 ಲಕ್ಷಗಳನ್ನು ವೆಚ್ಚ ಮಾಡಿ 19,685 ಫಲಾನುಭವಿಗಳಿಗೆ ನೆರವು. ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದಿಂದ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಹುಡ್ಕೊ ಸಾಲ ನೆರವಿನ ಯೋಜನೆಯಡಿ ತಲಾ ರೂ. 2.00 ಕೋಟಿ ವೆಚ್ಚದಲ್ಲಿ ವಸತಿ ಶಾಲ ಕಟ್ಟಡ ನಿರ್ಮಾಣ.

***ಸಾಧಿಸಿದ್ದು ಬಹಳಷ್ಟು, ಸಾಧಿಸಬೇಕಾಗಿರುವುದು ಇನ್ನೂ ಬಹಳಷ್ಟು***

# ಚಿಂತನೆಗೆ ಎಡೆಮಾಡಿಕೊಡುವ ನಾಟಕ

ಕಳೆದ ತಿಂಗಳು ರಂಗಾಯಣದ ಹಲವು ನಾಟಕಗಳು ಬೆಂಗಳೂರಿನ ರವೀಂದ್ರ ಕಲಾಭವನದ ವೇದಿಕೆಯಲ್ಲಿ ವಿಜೃಂಭಿಸಿದವು. ಅವುಗಳಲ್ಲಿ ಬ್ರೆಕ್ಟ್‌ನ ನಾಟಕ 'ಕಕೇಶಿಯನ್ ಚಾಕ್‌ಸರ್ಕಲ್'ನ ಕನ್ನಡ ಅವತರಿಣಿಕೆ 'ಬಳಪದವೃತ್ತ'ವು ಒಂದು.

ಈ ಲೇಖನ ಈ ನಾಟಕದ ವಿಮರ್ಶೆಯಲ್ಲ. ಏಕೆಂದರೆ 'ಕಕೇಶಿಯನ್' ಕನ್ನಡಕ್ಕೆ ಹೊಸತಲ್ಲ. ಬಹಳಷ್ಟು ಬಾರಿ, ಅನೇಕ ಗುಂಪುಗಳು ಇದರ ಪ್ರಯೋಗ ನಡೆಸಿವೆ. ಆದರೆ ಈ ಬಾರಿಯ ರಂಗಾಯಣದ ಈ ಪ್ರಯೋಗ ವಿಭಿನ್ನ ಅನುಭವವನ್ನು ಕೊಟ್ಟಿದ್ದನ್ನು ಇಲ್ಲಿ ದಾಖಲಿಸಲೇಬೇಕಿದೆ.

ಮೊದಲನೆಯದಾಗಿ ನಾಟಕದ ಕಾಸ್ಟ್ಯೂಂ 'ಬಳಪದವೃತ್ತಕ್ಕೆ' ಅವರ ಮನೆ ಜನರನ್ನೂ (ರಾಣಿ, ಮಂತ್ರಿ ಮುಂತಾದವರನ್ನು) ಉಳಿದು ಮಿಕ್ಕ ಸಾಮಾನ್ಯರಿಗೆ ಗೊರವರ ವೇಷ ಬಳಸಿದ್ದು ತುಂಬಾ ಅದ್ಭುತ ಅನುಭವವನ್ನು ಕೊಟ್ಟಿತ್ತು. ಎಲ್ಲ ಕಾಲದಲ್ಲೂ ಎಲ್ಲ ಅನುಕೂಲ, ಸಂಪತ್ತು, ರಿಯಾಯಿತಿ ಮುಂತಾದವನ್ನು ಉಳ್ಳವರು ಮಾತ್ರ ಪಡೆಯುತ್ತ, ಸಾಮಾನ್ಯರು ವಂಚಿತರಾಗುತ್ತ ಹೋಗುವುದನ್ನು ಜಾನಪದದ ಉಡುಗೆ ತೊಡುಗೆಗಳ ಮುಖಾಂತರ ಸಮರ್ಥವಾಗಿ ಪ್ರಚುರ ಪಡಿಸಿದರು.

ಎರಡನೆಯದಾಗಿ ಕಥೆಯ ಒಳ ಹೊಳಹುಗಳನ್ನು ಔಚಿತ್ಯ ಪೂರ್ಣವಾಗಿ, ನವಿರಾಗಿ, ಬಿಂಬಿಸಿದ್ದು. ಮಹಿಳೆಯರ ಬದುಕಿನ ಬಗ್ಗೆ ಅನೇಕ ಸತ್ಯಗಳು ಪ್ರದೇಶ, ಕಾಲ, ಮೀರಿ ವಿಶ್ವ ಸತ್ಯಗಳಾಗಿ ಉಳಿದುಬಿಡುವ ಒಂದಂಶ ಈ ನಾಟಕದ ಕೇಂದ್ರ ಧ್ವನಿ. ಇದು ಎಲ್ಲ ನೆಲದಲ್ಲೂ ಬಿತ್ತಿ ಬೆಳೆದಿರುವಂತಹ ಧ್ವನಿ. ಇದು ರಂಗಾಯಣದ ಪ್ರಯೋಗದಲ್ಲಿ ಸ್ಪಷ್ಟವಾಗಿ ನೋಡುಗರನ್ನು ಚಿಂತನೆಗೆ ಹಚ್ಚುವಲ್ಲಿ ಯಶಸ್ವಿಯಾಗಿದೆ. ಮಹಿಳೆಯ ಸ್ಥಾನ ಮಾನಗಳು ಎಲ್ಲ ಕಾಲ, ನೆಲದಲ್ಲಿರುವುದೂ ಸಂಧಿಗ್ಧದಲ್ಲಿಯೇ. ಗಂಡುಮಗುವನ್ನು ಹಡೆದಾಗ ಮನ್ನಣೆ, ಅನುಕೂಲಕರ ಹೆಂಡತಿಯಾದಾಗ ಸ್ಥಿತಿ ಸ್ವಲ್ಪ ಉತ್ತಮ, ಗಂಡನ ಚಿತೆಯೇರಿ ಸತಿಯಾದವಳಿಗೆ ಪೂಜೆ. ಹೀಗೆ ಅವಳ ಭೌತಿಕ ಆಚರಣೆಗಳಿಂದ ಮಾತ್ರ ಗುರುತಿಸಲ್ಪಡುವ ಹೆಣ್ಣು ಬೌದ್ಧಿಕವಾಗಿ, ಅನುಭವಿಸುವ ಒತ್ತಡಗಳಿಗೆ ಒಂದಿಷ್ಟು ಬೆಲೆಯಿರದೆ ನಗಣ್ಯವಾಗಿಯೇ ಉಳಿದುಬಿಡುವುದು ಸತ್ಯ.

'ತಾಯಿ' ಎನ್ನುವುದು ಹಡೆಯುವುದರಿಂದ ಮಾತ್ರ ಬರುವ ಪಟ್ಟವೇ ಅಥವಾ ಸಂಗೋಪನೆ ಸಹ ಮುಖ್ಯವೇ ಎನ್ನುವ ಚರ್ಚೆ ಈ ನಾಟಕದ ಮುಖ್ಯವಸ್ತು. ತಾನು ಹಡೆದ ಮಗುವನ್ನು ಒಮ್ಮೆಯೂ ಎತ್ತದೆ ದಾಸಿಯರಿಂದಲೇ ಸಾಕಿಸುತ್ತಿದ್ದ ರಾಣಿ, ದಂಗೆ ಕೋರರಿಂದ ಗದ್ದುಗೆಗೆ ವಿಪತ್ತು ಬಂದಾಗ, ಹೆತ್ತ ಮಗುವಿನ ನೆನಪೇ ಹಾರಿ ತನ್ನನ್ನೂ ಉಳಿಸಿಕೊಳ್ಳುವುದೇ ಮುಖ್ಯ ಮಾಡಿಕೊಳ್ಳುತ್ತಾಳೆ. ಬಿಸಾಡಿಹೋದ ಮಗುವಿಗೆ ಮರುಜೀವ ಕೊಡುವವಳು ಅವಿವಾಹಿತ ದಾಸಿ. ದಂಗೆ ಕಳೆದು ಪರಿಸ್ಥಿತಿ ಮತ್ತೆ ಶಾಂತವಾಗಿ ಗದ್ದುಗೆಯೂ ದಕ್ಕಿದಾಗ ರಾಣಿಗೆ ತನ್ನ ಮಗುವಿನ ನೆನಪಾಗುತ್ತದೆ. ಇಲ್ಲಿ ಹಕ್ಕಿನ ಪ್ರಶ್ನೆ ಏಳುತ್ತದೆ. ಮಗುವಿನ ಹಕ್ಕು ಹಡೆದವಳಿಗೋ? ಸಾಕಿದವಳಿಗೋ? ಎನ್ನುವ ಪ್ರಶ್ನೆ!

ಮನುಷ್ಯ ಸಂಬಂಧಗಳು ಗಟ್ಟಿಗೊಳ್ಳುವುದು ಕೇವಲ ರಕ್ತ ಮಾಂಸವನ್ನು ಹಂಚಿಕೊಂಡಾಗ ಮಾತ್ರವಲ್ಲ. ಸಂಘ ಜೀವನದಿಂದ, ಎನ್ನುವ ಸತ್ಯಕ್ಕೆ ಇಲ್ಲಿ ಬೆಲೆ ಸಿಕ್ಕುತ್ತದೆ. ಕೇವಲ ಮಗುವನ್ನು ಪಡೆಯಲೇಬೇಕೆನ್ನುವ ಹಠದಿಂದ ನ್ಯಾಯಾಧೀಶ ಬರೆದು ನಿಲ್ಲಿಸಿದ ವೃತ್ತದಿಂದ ಮಗುವಿನ ಕೈ ಎಳೆದೇ ಹಾಕಿ ಬಿಡುವ ಹೆತ್ತ ತಾಯಿ, ಹೀಗೆ ಎಳೆಯುವ ಕ್ರಿಯೆ ಮಗುವಿಗೆ ನೋವನ್ನು ತರುತ್ತದೆ ಎನ್ನುವ ಕಲ್ಪನೆಯಿಂದಲೇ ಮಗುವಿನ ಕೈಯನ್ನು ಸೋಕಲಾರದ ಸಾಕುತಾಯಿ! ಇದು ಸಾಕುವಿಕೆಯಲ್ಲಿರುವ ಪರಮಾಪ್ತವೂ ನವಿರೂ ಆದ ಭಾವನೆಗಳು ಮಗು ತರ್ಕಬದ್ಧವಾಗಿ ಸಾಕುತಾಯಿಗೆ ದಕ್ಕುತ್ತದೆ.

ಈ ನಾಟಕದ ಮಹಿಳಾ ಪಾತ್ರಧಾರಿಗಳು ಬಗ್ಗೆ ಎಷ್ಟು ಬೆರಗಿನಿಂದ ಬರೆದರೂ ಕಡಿಮೆಯೇ. ಬಹಳಷ್ಟುದಿನ ಕಾಡುವ ಪಾತ್ರಗಳೆಂದರೆ ರಾಣಿ ಮತ್ತು ದಾಸಿ. ಒಂದು ಕಠೋರತೆ ಮತ್ತು ಕೃತಕತೆಗೆ ಸಂಕೇತವಾದರೆ ಮತ್ತೊಂದು ಕರುಣೆಗೆ ಮತ್ತು ಭಾವುಕತೆಗೆ ಸಂಕೇತವಾಗುತ್ತದೆ. ಈ ಇಬ್ಬರು ನಟಿಯರೂ ಎಷ್ಟು ಸಮರ್ಥವಾಗಿ ತಮ್ಮ ಪಾತ್ರಗಳನ್ನು ನಿರ್ವಹಿಸಿದ್ದಾರೆಂದರೆ ಇವರ ಕಾರಣಕ್ಕೇ ಈ ನಾಟಕವನ್ನು ಮತ್ತೆ ಮತ್ತೆ ನೋಡಬೇಕೆನಿಸುತ್ತದೆ.

ಅತ್ಯಂತ ಕಡಿಮೆ ರಂಗಪರಿಕರಗಳಿಂದ ಅದ್ಭುತ ಅನುಭವವನ್ನು ಕಾಡುವುದರಲ್ಲಿ 'ರಂಗಾಯಣ'ದ ಶ್ರೇಷ್ಠತೆ ಅಡಗಿದೆ. ನದಿಗೆ ಮುರಿದ ಸೇತುವೆ ಅಬ್ಬರದಿಂದ ಹರಿಯುವ ನದಿ, ಹಿಂದೆ ಬೆಳಕು ನೆರಳಾಟ ಬೆನ್ನಲ್ಲಿ ಮಗುವನ್ನು ಕಟ್ಟಿಕೊಂಡು, ಜೋಲಾಡುವ ಹಗ್ಗಹಿಡಿದು, ಬೊಂಬಿನ ಸೇತುವೆ ಮೇಲೆ ನಡೆಯುವ ದಾಸಿ, ಆ ಕ್ಷಣಕ್ಕೆ ನಿಜವಾಗಿ ಪ್ರೇಕ್ಷಕರು ತಮ್ಮ ಸೀಟುಗಳ ತುದಿಗೆ ಬಂದು ಉಗುರುಕಚ್ಚುತ್ತಿದ್ದುದನ್ನು ಗಮನಿಸಿ. ಆಕೆ ದಾಟಿದ ನಂತರ ದೀರ್ಘ ಚಪ್ಪಾಳೆಯೇನು? ಎಲ್ಲರ ನಿಟ್ಟುಸಿರೇನು? ಮೆಚ್ಚುಗೆಯ ನೋಟವೇನು? ಆಕೆ ಬೆನ್ನ ಹಿಂದೆ ಕಟ್ಟಿಕೊಂಡಿದ್ದು ನಿಜವಾಗಿ ಮಗುವಲ್ಲ ಬಟ್ಟೆಯಗಂಟು, ಆಕೆ ದಾಟುತ್ತಿರುವುದು ನದಿಯನ್ನಲ್ಲ ಕಲಾಕ್ಷೇತ್ರದ ಮರದ ವೇದಿಕೆಯನ್ನು ಎನ್ನುವ ಸತ್ಯಗಳು ಆಕ್ಷಣಕ್ಕೆ ಯಾರ ನೆನಪಿನಲ್ಲೂ ಉಳಿದಿರಲಿಲ್ಲವಲ್ಲ! ಇದು ನಾಟಕ ತಂದು ಕೊಡುವ ಅದ್ಭುತ! ಉನ್ನತ ಮಟ್ಟದ ಪವಾಡ!!

ಇಂಥ ಅಪೂರ್ವ ನಾಟಕಗಳನ್ನು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಒದಗಿಸಿ ಕೊಡಲಿ ಎಂದು ರಂಗಾಯಣಕ್ಕೆ ಹಾರೈಸೋಣ

- ಅಚಲ

# ದಲಿತ ಮಹಿಳ ಸಮಾವೇಶ

ಕರ್ನಾಟಕದ ಇತಿಹಾಸದಸಲ್ಲಿ ಮೊದಲ ಬಾರಿಗೆ ನಾಲ್ಕು ಸಾವಿರಕ್ಕೂ ಹೆಚ್ಚು ಮಂದಿ ಮಹಿಳೆಯರು, ರಾಜ್ಯದ ಬೇರೆ ಬೇರೆ ಜಿಲ್ಲೆಗಳಿಂದ ಬಂದು ಫೆಬ್ರವರಿ 16ರಂದು ತುಮಕೂರು ಜಿಲ್ಲೆಯ ಪಾವಗಡದಲ್ಲಿ ಸಮ್ಮೇಳನ ನಡೆಸಿದ್ದರು. ಈ ಸಮ್ಮೇಳನವನ್ನು ರಾಷ್ಟ್ರೀಯ ದಲಿತ ಮಹಿಳಾ ಒಕ್ಕೂಟ, ಗ್ರಾಮೀಣ ಶೈಕ್ಷಣಿಕ ಅಭಿವೃದ್ಧಿ ಸಂಸ್ಥೆ, ಕರ್ನಾಟಕ ದಲಿತ ಜಾಗೃತ ಸಮಿತಿ, ಇವುಗಳು ಸಂಯುಕ್ತವಾಗಿ ಆಯೋಜಿಸಿದ್ದವು. ಏಷ್ಯಾ ಮಹಿಳಾ ಮಾನವ ಹಕ್ಕುಗಳ ಸಹಕಾರವೂ ಇದಕ್ಕಿತ್ತು.

ಪಾವಗಡದಲ್ಲಿ ನಡೆದ ಮೊದಲ ದಲಿತ ರಾಜ್ಯ ಸಮ್ಮೇಳನದಲ್ಲಿ ಮಹಿಳೆಯರು ಮಂಡಿಸಿದ ಬೇಡಿಕೆಗಳು ಹೀಗಿದ್ದವು:

★ ಈ ಸಂದರ್ಭದಲ್ಲಿ ನಾವು ಕೇಳ್ಕೊಳ್ಳೋದು- ನಮಗೆ ಆರೋಗ್ಯ, ಶಿಕ್ಷಣ ಉದ್ಯೋಗ, ಪೌಷ್ಠಿಕಾಹಾರಗಳಲ್ಲಿ ಭದ್ರತೆ, ವಸತಿ, ಸಾಮೂಹಿಕ ರಕ್ಷಣೆಯನ್ನು ಒದಗಿಸಿವುದು. (ಕೆಲಸದ ಸ್ಥಳ, ವಾಸಸ್ಥಳ ಮತ್ತು ಸಮಾಜದಲ್ಲಿ)

★ ನಾವು ಎಲ್ಲೆಂದರಲ್ಲಿ ಸಂಚರಿಸುವ ಸ್ವಾತಂತ್ರ್ಯ, ನಾವಿಷ್ಟ ಪಡುವ ಕೆಲಸವನ್ನು ಆಯ್ಕೆ ಮಾಡುವ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನನುಭವಿಸುವ ಹಕ್ಕುಗಳಿಗೆದುರಾಗಿ ವರ್ತಿಸುವವರ ವಿರುದ್ಧ ಕಾನೂನು ಕ್ರಮಗಳನ್ನು ಜಾರಿಗೊಳಿಸುವಲ್ಲಿ ಆಡಳಿತ ಯಂತ್ರ, ಅಧಿಕಾರಶಾಹಿಗಳು ಯಾವುದೇ ಪಕ್ಷಪಾತ, ಪೂರ್ವಾಗ್ರಹ ತೋರದೆ ಯಥಾಸ್ಥಿತಿಯಲ್ಲಿ ಕಾನೂನನ್ನು ಜಾರಿಗೊಳಿಸಬೇಕು.

★ ರಾಜಕೀಯ ರಂಗಕ್ಕಿಳಿಯಲು ನಮಗೆ ಅನುಕೂಲವಾಗುವಂತೆ ಪ್ರತ್ಯೇಕ ಮೀಸಲಾತಿಯನ್ನು ಜನರಿಗೆ ಆಧಾರಿತವಾಗಿ ಒದಗಿಸುವುದು.

★ ಅಸ್ಪೃಶ್ಯತಾಚಾರಣೆ, ನಮ್ಮ ರಕ್ಷಣೆ, ಘನತೆ, ಗೌರವದಿಂದ ಕೂಡಿದ ಬದುಕನ್ನು ನಾವು ಸಾಗಿಸಲು ಅನುಕೂಲಕರವಾಗಿ ಜಾರಿಗೆ ಬಂದಿರುವ ಕಾಯಿದೆಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತನ್ನಿ.

★ ಪ್ರತಿ ದಲಿತ ಕುಟುಂಬಕ್ಕೆ ಕೃಷಿಯೋಗ್ಯವಾದ ಐದು ಎಕರೆ ಜಮೀನನ್ನು ದಲಿತ ಮಹಿಳೆಯರಿಗೆ ನೋಂದಾಯಿಸಿಕೊಡಿ.

★ ನಮ್ಮನ್ನು ಇತರ ಮಹಿಳೆಯರ ವರ್ಗದಲ್ಲಿ ಗುರುತಿಸುವ ಬದಲು ದಲಿತ ಮಹಿಳೆಯರನ್ನು ಒಂದು ವಿಶಿಷ್ಟ ಸಾಮಾಜಿಕ ಗುಂಪೆಂದು ಗುರುತಿಸಿ, ಅಭಿವೃದ್ಧಿಗಾಗಿ ಯೋಜನೆಯಲ್ಲಿ ವಿಶೇಷ ಪಾಲನ್ನು ಮೀಸಲಿಡಬೇಕು.

★ ಯೋಜನೆಗಳ ತಯಾರಿ, ಹಣ ಮೀಸಲಿಡುವಿಕೆ, ಶಿಕ್ಷಣ ಹಾಗೂ ಉದ್ಯೋಗಗಳಲ್ಲಿ ನೀಡುವ ಮೀಸಲಾತಿ ಸೌಲಭ್ಯದಲ್ಲಿ ದಲಿತ ಮಹಿಳೆಯರಿಗೆ ವಿಶೇಷ ಮತ್ತು ವೈಶಿಷ್ಟ್ಯ ರೀತಿಯ ಅವಕಾಶಗಳನ್ನು ಒದಗಿಸಬೇಕು.

★ ದಲಿತ ಮಹಿಳೆಯರ ಅಭಿವೃದ್ಧಿ ಅವರನ್ನು ಮುಖ್ಯವಾಹಿನಿಗೆ ತರುವ ಮೂಲಕ ಸಮಾನತೆ ಮತ್ತು ನ್ಯಾಯ ಒದಗಿಸಲು ರಾಷ್ಟ್ರೀಯ ಮಟ್ಟದಲ್ಲಿ ಯೋಜನೆಗಳನ್ನು ರೂಪಿಸಬೇಕು.

★ ಬಹುಪಾಲು ದಲಿತ ಮಹಿಳೆಯರೇ ಇರುವ ಅಸಂಘಟಿತ ಕಾರ್ಮಿಕ ಕ್ಷೇತ್ರಕ್ಕೆ ಅನ್ವಯಿಸುವಂತೆ ರಾಷ್ಟ್ರೀಯ ಶ್ರಮ ನೀತಿಯನ್ನು ಜಾರಿಗೆ ತರಬೇಕು.

ರಾಷ್ಟ್ರೀಯ ಮಹಿಳಾ ಆಯೋಗ, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಎಸ್.ಸಿ/ಎಸ್.ಟಿ ಆಯೋಗ, ಸಫಾಯಿ ಕರ್ಮಚಾರಿ ಆಯೋಗ, ಇವುಗಳು ದಲಿತ ಮಹಿಳೆಯರ ಸಮಸ್ಯೆಗಳ ಬಗ್ಗೆ ವಿಶೇಷ ಆಸ್ಥೆ ವಹಿಸುವಂತೆ ಕಾನೂನಿಗನುಸಾರವಾಗಿ ಆಜ್ಞೆಯನ್ನು ಹೊರಡಿಸಬೇಕು.

★ ರಾಷ್ಟ್ರ, ರಾಜ್ಯ ಮಟ್ಟದಲ್ಲಿ ದಲಿತ ಮಹಿಳೆಯರ ಮೇಲಾಗುವ ಹಿಂಸಾಚಾರ, ದೌರ್ಜನ್ಯಗಳನ್ನು ತಡೆಗಟ್ಟಲು ಶಾಸನಬದ್ಧ ಸಂಸ್ಥೆಗಳನ್ನು ರಚಿಸಬೇಕು.

★ ದಲಿತ ಮಹಿಳೆಯರ ಸ್ಥಾನಮಾನದ ಬಗ್ಗೆ ಶ್ವೇತಪತ್ರವನ್ನು ಪಾರ್ಲಿಮೆಂಟ್ ಮತ್ತು ವಿಧಾನಸಭೆಗಳಲ್ಲಿ ಕಾಲಕಾಲಕ್ಕೆ ಮಂಡಿಸಬೇಕು. ದಲಿತ ಮಹಿಳೆಯರಿಗೆ ಸಂಬಂಧಿಸಿದ ಅಂಕಿ ಅಂಶಗಳು ಪ್ರತ್ಯೇಕವಾಗಿ ದೊರಕುವ ಕ್ರಮ ಕೈಗೊಳ್ಳಬೇಕು.

ಈ ಹಲವು ಬೇಡಿಕೆಗಳನ್ನು ದಲಿತ ಸಮ್ಮೇಳನದಲ್ಲಿ ಮಂಡಿಸಿ ಚರ್ಚಿಸಲಾಯಿತು.

- ಆಧಾರ: ಜನವಾಹಿನಿ

# 'ಮಹಿಳಾದಿನ' ಏನಾಗಿ ಹೋಯ್ತು?

ಮಾರ್ಚ್ ತಿಂಗಳು ಬಂತೆಂದರೆ ಮಹಿಳಾದಿನದ ಸಂಭ್ರಮವೋ ಸಂಭ್ರಮ. ಇಡೀ ತಿಂಗಳು, ಇನ್ನೂ ಹೆಚ್ಚೆಂದರೆ ನಂತವೂ ವಿವಿಧ ರೀತಿಯಲ್ಲಿ, ವಿವಿಧ ಆಶಯಗಳಿಂದ ಮಹಿಳಾ ದಿನಾಚರಣೆಯನ್ನು ಆಚರಿಸಲಾಗುತ್ತಿದೆ. (ಅದರಲ್ಲೂ ಅಂತರರಾಷ್ಟ್ರೀಯ ಮಹಿಳಾದಿನದವೆಂದ ಮೇಲೆ **ಅದರ** ಪ್ರಾಮುಖ್ಯತೆ ಕಡಿಮೆಯೇ! ಇಂದು ವಿಶ್ವವೇ ಒಂದು **ಚಿಕ್ಕ** ಹಳ್ಳಿಯಾಗಿರುವಾಗ ಅಂತರರಾಷ್ಟ್ರೀಯ ಮಹಿಳಾ ದಿನಕ್ಕೂ ಪ್ರಾಮುಖ್ಯತೆ ಇರಲೇಬೇಕಲ್ಲ. ಹಾಗೆಯೇ ಇಂದಿನ ಜಾಗತೀಕರಣದ ಪ್ರಭಾವದಿಂದ ಮಹಿಳಾದಿನ ಹೇಗೆ ಮುಕ್ತವಾಗಿರಲು ಸಾಧ್ಯ?)

ತೊಂಭತ್ತುನಾಲ್ಕು ವರ್ಷಗಳ ಹಿಂದೆ 1907ರ ಮಾರ್ಚ್ 8 ರಂದು ನ್ಯೂಯಾರ್ಕಿನಲ್ಲಿ ಸಿದ್ಧ ಉಡುಪುಗಳ ಕಾರ್ಖಾನೆಯ ಮಹಿಳೆಯರು ತಮ್ಮ ಬೇಡಿಕೆಗಳೊಂದಿಗೆ ಬೀದಿಗಿಳಿದರು. ಪ್ರತಿಭಟನಾ ಪ್ರದರ್ಶನ ಮಾಡಿದರು ಸುಮಾರು 600ಕ್ಕೂ ಹೆಚ್ಚು ಮಂದಿ ಮಹಿಳೆಯರ ಈ ಪ್ರತಿಭಟನೆ ಎಂಟು- ಗಂಟೆಗಳ ದುಡಿಮೆಯನ್ನು ಮತ್ತು ಉತ್ತಮ ದುಡಿಯುವ ಪರಿಸರದ ಸವಲತ್ತುಗಳನ್ನು ಕೇಳುವುದೇ ಮುಖ್ಯ ಅಂಶವಾಗಿತ್ತು. ಈ ಪ್ರತಿಭಟನೆಯಿಂದ ತಕ್ಷಣ ಅವರಿಗೆ ಈ ಸವಲತ್ತುಗಳು ದೊರಕಿತೋ ಇಲ್ಲವೋ ತಿಳಿದಿಲ್ಲ, ಆದರೆ ಇಂದಿನ ಸಂಘಟಿತ ದುಡಿಯುವ ಮಹಿಳೆಯರು ಅನುಭವಿಸುತ್ತಿರುವ ಹಲವಾರು ಸವಲತ್ತುಗಳಿಗೆ, ಈ ಪ್ರತಿಭಟನೆ ನಾಂದಿಯಾಯಿತು; ಇಂತಹ ಹಲವಾರು ಪ್ರತಿಭಟನೆಗಳು ಕಾರಣವಾದವು. ಗೃಹಲಕ್ಷ್ಮಿಯಾಗಿ ಮನೆಯೊಳಗೇ ಕಂಗೊಳಿಸಬೇಕಾದ ಮಹಿಳೆಯರು ಬೀದಿಗಿಳಿದ ಈ ಘಟನೆ ಹೊರಜಗತ್ತಿಗೆ ಹಾಸ್ಯಾಸ್ಪದವಾಗಿ ಕಂಡಿರಬಹುದು. ಕೆಲವು ಮಂದಿ ಇದನ್ನು 'ಪೆಟಿಕೋಟ್ ಮುಷ್ಕರ' ಎಂದು ಲೇವಡಿ ಕೂಡ ಮಾಡಿದರು. (ಆದರೆ ಅಂದು ಬೀದಿಗಿಳಿದ ಮಹಿಳೆ ಕೇವಲ ದುಡಿಮೆಯ ಸೌಲಭ್ಯಕ್ಕಷ್ಟೇ ಅಲ್ಲ ಇಂದು ತನ್ನ ಜಗತ್ತನ್ನು ಅಣುಬಾಂಬಿನ ವಿನಾಶದಿಂದ ರಕ್ಷಿಸಲೂ ಬೀದಿಗಿಳಿದಿದ್ದಾಳೆ.)

ನಂತರದ ದಿನಗಳಲ್ಲಿ ನ್ಯೂಯಾರ್ಕಿನ ಮಹಿಳೆಯರ ಹೋರಾಟ ಹಲವಾರು ಹೋರಾಟಗಳಿಗೆ ಸ್ಫೂರ್ತಿ ನೀಡಿತು. ಮತದಾನದ ಹಕ್ಕಿಗಾಗಿ ಹೋರಾಡುತ್ತಿದ್ದ ಮಹಿಳೆಯರಿಗೆ ವಿಶೇಷ ಸ್ಫೂರ್ತಿಯನ್ನು ನೀಡಿತು. 1808ರಲ್ಲಿ ಸೋಷಿಯಲಿಸ್ಟ್ ಮಹಿಳೆಯರು ನ್ಯೂಯಾರ್ಕಿನಲ್ಲಿ ಇದೇ ದಿನ ಮೊದಲ ಬಾರಿಗೆ ಮತದಾನದ ಹಕ್ಕಿಗಾಗಿ ಪ್ರತಿಭಟನಾ ಪ್ರದರ್ಶನ ಮಾಡಿದರು.

1910ರಲ್ಲಿ ಹೊಸದಾಗಿ ಸ್ಥಾಪಿತವಾಗಿದ್ದ ಅಂತರರಾಷ್ಟ್ರೀಯ ಸೋಷಿಯಲಿಸ್ಟ್ ಮಹಿಳಾ ಚಳುವಳಿಯ ನಾಯಕಿಯಾಗಿದ್ದ ಕ್ಲಾರಾ ಜೆಟ್‌ಕಿನ್ ಅವರ ಎರಡನೇ ಸಮಾವೇಶದಲ್ಲಿ ನಿರ್ಣಯವೊಂದನ್ನು ಮಂಡಿಸಿದಳು: ಮಾರ್ಚ್ 8ನ್ನು **ಅಂತರರಾಷ್ಟ್ರೀಯ** ಮಹಿಳಾದಿನವನ್ನಾಗಿ ಆಚರಿಸಬೇಕೆಂದು **ಘೋಷಿಸಿದಳು**. 1911ರಿಂದ ಹಿಡಿದು ಮೊದಲ ಜಾಗತಿಕ ಯುದ್ಧದ ಆರಂಭದವರೆಗೂ ಯುರೋಪಿನ ಮಹಿಳೆಯರು ಈ ದಿನದಂದು ಪ್ರಮುಖ ಪಟ್ಟಣಗಳಲ್ಲಿ ಪ್ರತಿಭಟನಾ ಪ್ರದರ್ಶನ ಮೆರವಣಿಗೆಗಳನ್ನು ನಡಸುತ್ತಿದ್ದರು.

(ಮೊದಲ ಸಮಾಜವಾದಿ ರಾಷ್ಟ್ರವಾದ ರಷ್ಯಾದಲ್ಲಿ ಮೊದಲಿಗೆ ಮಹಿಳಾ ದಿನ ಅಂತಹ ಪ್ರಾಮುಖ್ಯತೆಯನ್ನೇನೂ ಪಡೆಯಲಿಲ್ಲ. 1911ರಲ್ಲಿ ಅಲೆಗ್ಸಾಂಡ್ರಾ ಕೊಲಂತೈ ಇದನ್ನು ಗಮನಿಸುತ್ತಾ ''ಪಕ್ಷದ ನಾಯಕರಿಗೆ ಮಹಿಳಾ ದಿನದ ಪ್ರಾಮುಖ್ಯತೆ ಅಷ್ಟಾಗಿ ಮನವರಿಕೆಯಾಗುತ್ತಿಲ್ಲ. ನನ್ನ ಎಷ್ಟೇ ಒತ್ತಾಯವೂ ಅವರಲ್ಲಿ ಪ್ರತಿಕ್ರಿಯೆಯನ್ನು ಉಂಟು ಮಾಡುತ್ತಿಲ್ಲ'' ಎಂದಳು. 1914ರಲ್ಲಿ ಮಾರ್ಚ್ 8 ರಂದು ಸೇರಿದ್ದ ಜನ ಸಂದಣಿಕಾರರನ್ನು ಕಂಡು ತ್ಸಾರ್ ಸರ್ಕಾರ ಎಚ್ಚೆತ್ತಿತು. ಕೆಲವು ಸಭೆಗಳಲ್ಲಿ ಭಾಷಣಕಾರರನ್ನು ಬಂಧಿಸಿದರೆ, ಮತ್ತೆ ಕೆಲವು ಭಾಗಗಳಲ್ಲಿ ಕಾರ್ಯಕ್ರಮ ನಡೆಯದಂತೆ ನೋಡಿಕೊಳ್ಳಲಾಯಿತು.)

1917ರಲ್ಲಿ ರಷ್ಯಾದಲ್ಲಿ ನಡೆದ ಅಂತರರಾಷ್ಟ್ರೀಯ ಮಹಿಳಾದಿನ ಚರಿತ್ರಾರ್ಹವೂ, ಅವಿಸ್ಮರಣೀಯ ಅನುಭವವೂ ಆಗಿ ಉಳಿಯಿತು.) ಆ ದಿನ 90,000 ಪೆಟ್ರೋಗ್ರಾಡ್ ಕಾರ್ಮಿಕರು ಮುಷ್ಕರ ಹೂಡಿದ್ದರು. ಪೆಟ್ರೋಗ್ರಾಡ್‌ನ ಅಂಗಡಿಗಳಲ್ಲಿ ಬ್ರೆಡ್ ಸಾಕಷ್ಟು ಇರಲಿಲ್ಲ. ಆಗ ಬ್ರೆಡ್‌ಗಾಗಿ ಕ್ಯೂನಲ್ಲಿ ನಿಂತಿದ್ದ ಮಹಿಳೆಯೊಬ್ಬಳು ಬ್ರೆಡ್ ಅಂಗಡಿಯ ಕಿಟಕಿಗೆ ಕಲ್ಲೊಂದು ಎತ್ತಿ ಒಗೆದಳು. ಈ ಘಟನೆಯೇ ಉಳಿದ ಮಹಿಳೆಯರಿಗೂ ಸ್ಫೂರ್ತಿ ನೀಡಿತು. ತಮ್ಮ ಮಕ್ಕಳಿಗೆ, ಕುಟುಂಬಗಳಿಗೆ ಆಹಾರ ದೊರಕಿಸಲಾಗದ ಮಹಿಳೆಯರು, ಅವರೊಂದಿಗೆ ಸೋಷಿಯಲಿಸ್ಟರು ಮತ್ತು ಕೆಲವು ಪ್ರಗತಿಪರರು ಒಟ್ಟಾಗಿ ಸೇರಿ ಪ್ರತಿಭಟನಾ ಮೆರವಣಿಗೆಗಳನ್ನು ಮಾಡಿದರು. ಐದು ದಿನಗಳ ಕಾಲ ಸತತವಾಗಿ ನಡೆದ ಈ ಪ್ರದರ್ಶನಗಳ ಕಾವಿಗೆ ತ್ಸಾರನು ಮಣಿಯಲೇಬೇಕಾಯಿತು.) ಬೋಲ್ಷೆವಿಕ್ ಕ್ರಾಂತಿಯನಂತರ ಅಂತರರಾಷ್ಟ್ರೀಯ ಮಹಿಳಾ ದಿನ ರಷ್ಯಾದಲ್ಲಿ ಕಡ್ಡಾಯವಾದ ಆಚರಣೆಯಾಗಿ ಉಳಿಯಿತು.

ಚೀನಾದಲ್ಲಿ ಮಹಿಳಾ ದಿನವನ್ನು ಮೊದಲ ಬಾರಿಗೆ 1924ರಲ್ಲಿ ಆಚರಿಸಲಾಯಿತು. ಆಗಿನ kuomintang ಪಕ್ಷವು ಮಹಿಳಾ ವಿಮೋಚನಾ ಚಳುವಳಿಯನ್ನು ಕ್ರಾಂತಿಯೊಂದಿಗೆ ಸೇರಿಸಿತು. ಒಂದು ಕರಪತ್ರವನ್ನು ಹೊರಡಿಸಿ, ಎಲ್ಲ ಮಹಿಳೆಯರನ್ನೂ ಸಂಘಟಿಸಿ ಅವರ ಕಾರ್ಯಕ್ಷೇತ್ರವಾದ guangdongನಲ್ಲಿ ಪ್ರತಿಭಟನೆ ಮಾಡಲು ಕರೆ ನೀಡಿತು. ಅವರ ಪ್ಲೆಕಾರ್ಡುಗಳನ್ನು ಮಾಡಿ "ವಿದೇಶಿ ಸಾಮ್ರಾಜ್ಯ ಶಾಹಿಗೆ ಧಿಕ್ಕಾರ, ಚೀನಾವನ್ನು ಆದರ ವಸಾಹತುಶಾಹಿ ಸ್ಥಾನದಿಂದ ಮುಕ್ತಗೊಳಿಸಿ" ಎಂಬ ಘೋಷಣೆಗಳನ್ನು ಬರೆದು ಮಹಿಳಾ ದಿನವನ್ನು ಆಚರಿಸಿದರು.

ಎರಡನೆಯ ಮಹಾಸಮರದ ನಂತರ ಅಂತರರಾಷ್ಟ್ರೀಯ ಮಹಿಳಾ ದಿನದ ಬಹುಮುಖ್ಯ ಘೋಷಣೆಯು ವಿಶ್ವಶಾಂತಿಯ ಬೇಡಿಕೆಯಾಗಿತ್ತು. ವಿಶೇಷವಾಗಿ ಬ್ರಿಟನ್ ಮತ್ತು ಯೂರೋಪ್‌ಗಳಲ್ಲಿ ವಿಶ್ವಶಾಂತಿ ದಿನವೆಂದೇ ಮಹಿಳಾ ದಿನವನ್ನು ಆಚರಿಸಲಾಗುತ್ತಿತ್ತು.

ಆರಂಭದಲ್ಲಿ ಬದಲಾವಣೆಯ ಬೇಡಿಕೆಯೊಂದಿಗೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಆರಂಭವಾದ ಮಹಿಳಾದಿನ ಸೋಷಿಯಲಿಸ್ಟ್ ಪ್ರಪಂಚದಾದ್ಯಂತ ಹರಡಿ ಈಗ ಅಂತರರಾಷ್ಟ್ರೀಯ ಮಹಿಳಾ ದಿನವಾಗಿ ಮಾನ್ಯವಾಗಿದೆ.

1986ರಲ್ಲಿ ಮಾರ್ಚ್ 8ರಂದು ಮನಿಲಾದಲ್ಲಿ ನಡೆದ ಅಂತರಾಷ್ಟ್ರೀಯ ಮಹಿಳಾ ದಿನದಲ್ಲಿ 70 ಗುಂಪುಗಳಿಗೆ ಸೇರಿದ ಸಾವಿರಾರು ಫಿಲಿಪನ್ ಮಹಿಳೆಯರು ಅಲ್ಲಿ ವೇದಿಕೆಯ ಮೇಲೆ ಬರೆದ ದೊಡ್ಡ ಘೋಷಣೆ ಹೀಗಿತ್ತು: "ಮಹಿಳೆಯರು ಸ್ವತಂತ್ರರಾಗದಿದ್ದರೆ ಆ ದೇಶವು ಸ್ವತಂತ್ರ ದೇಶವಲ್ಲ".

ಭಾರತದಲ್ಲಿ ಮಹಿಳಾ ದಿನದ ಆಚರಣೆ ವ್ಯಾಪಕವಾಗಿ ಆರಂಭವಾದುದರ ದಾಖಲೆಯನ್ನು ನಿಶ್ಚಿತವಾಗಿ ಗುರುತಿಸುವುದು ಸ್ವಲ್ಪ ಕಷ್ಟವಾದರೂ, 1960ರಲ್ಲಿ ವಿಮೆನ್ಸ್ ಇಂಟರ್‌ನ್ಯಾಷನಲ್ ಡೆಮಾಕ್ರಟಿಕ್ ಫೆಡರೇಷನ್ ಅಂತರಾಷ್ಟ್ರೀಯ ಮಹಿಳಾ ದಿನದ ಸುವರ್ಣ ಮಹೋತ್ಸವವನ್ನು ಆಚರಿಸಲು ನಿರ್ಧರಿಸಿದಾಗ ಭಾರತದಲ್ಲೂ ಹಲವಾರು ರಾಜ್ಯಗಳಲ್ಲಿ ಈ ಉತ್ಸವವನ್ನು ಸಂಭ್ರಮದಿಂದ ಆಚರಿಸಲಾಯಿತು.

ವಿಶ್ವಸಂಸ್ಥೆಯು ನೀಡಿದ ಕರೆಯ ಮೇರೆಗೆ 1975ರನ್ನು ಅಂತರರಾಷ್ಟ್ರೀಯ ಮಹಿಳಾ ವರ್ಷವೆಂದು ಆಚರಿಸುವಲ್ಲಿ ಭಾರತ ಸರ್ಕಾರ ಹಾಗೂ ಮಹಿಳಾ ಸಮುದಾಯ ಹಿಂದೆ ಬೀಳಲಿಲ್ಲ. ಈ ಮಹಿಳಾ ವರ್ಷ ಮಹಿಳಾದಶಕವಾಗಿ ವಿಸ್ತಾರಗೊಂಡಾಗ ಮಹಿಳಾಪರ ವಿಷಯಗಳಿಗೆ, ಸಮಸ್ಯೆಗಳಿಗೆ ಸಾರ್ವಜನಿಕರ ಗಮನದಲ್ಲಿ ಹೆಚ್ಚು ಒತ್ತು ಬಿತ್ತು. ಈ ದಶಕದಲ್ಲಿ ನಡೆದ ಬಿರುಸಿನ ಮಹಿಳಾ ಚಟುವಟಿಕೆಗಳು ಮಹಿಳಾ ದಿನಾಚರಣೆಯನ್ನು, ಅದರ ಪ್ರಾಮುಖ್ಯತೆಯನ್ನು ವಿಶೇಷವಾಗಿ ಮನಗಂಡವು. ಅತ್ಯಾಚಾರ ವಿರೋಧಿ, ವರದಕ್ಷಿಣೆ ವಿರೋಧಿ ಚಳುವಳಿಗಳು ಮಹಿಳಾದಿನವನ್ನು ಅರ್ಥಪೂರ್ಣವಾಗಿ ತಮ್ಮ ಚಳುವಳಿಯ ವಿಸ್ತರಣೆಯಾಗಿ ಆಚರಿಸಿದವು. ಮಹಿಳೆಯರಿಗೆ ಅಗತ್ಯವಾದ ಕಾನೂನಿನಲ್ಲಿ ಸುಧಾರಣೆ ಹಾಗೂ ಪ್ರಗತಿಪರ ಕಾನೂನುಗಳಿಗಾಗಿ ಬೇಡಿಕೆ ಇವೆ ಮಹಿಳಾದಿನದ ಬೇಡಿಕೆಗಳೂ ಆಗಿದ್ದವು. ಈ ಸಂದರ್ಭದಲ್ಲಿ ಹುಟ್ಟಿಕೊಂಡ ಹೊಸ ಮಹಿಳಾಗುಂಪುಗಳ ಕಾರ್ಯವೈಖರಿ ರಾಜಕೀಯ ಪಕ್ಷಗಳ ಮೇಲೂ ಪ್ರಭಾವ ಬೀರಿತು ಮತ್ತು ಸರ್ಕಾರವು ಇದನ್ನು ಮುಖ್ಯವಾಗಿ ಗಮನಿಸಿತು. ಕಳೆದು ಕೆಲವು ವರ್ಷಗಳಿಂದೀಚೆಗೆ ಮಹಿಳಾ ದಿನಾಚರಣೆ ಸರ್ಕಾರಿ ಕಾರ್ಯಕ್ರಮಗಳ ಒಂದಂಗವಾಗಿದೆ.

ಮಹಿಳಾ ಕಾರ್ಮಿಕರನ್ನೊಳಗೊಂಡ ಎಲ್ಲ ಬೃಹತ್ ಕಾರ್ಮಿಕ ಸಂಘಟನೆಗಳೂ ತಮ್ಮ ಸದಸ್ಯರನ್ನು ಸಂಘಟಿಸುವ ಕಾರ್ಯಕ್ರಮವಾಗಿ ಮಹಿಳಾ ದಿನಾಚರಣೆಯನ್ನು ಆಚರಿಸ ತೊಡಗಿದವು. ಸರ್ಕಾರದ ಕಾರ್ಯಕ್ರಮಗಳು, ಕಾರ್ಮಿಕ ಸಂಘಟನೆಯ ಕಾರ್ಯಕ್ರಮಗಳೂ ಮಹಿಳೆಯರನ್ನು ಮತದಾರರನ್ನಾಗಿ, ತಮ್ಮ ಸಕ್ರಿಯ ಸದಸ್ಯರನ್ನಾಗಿ ನೋಡುವ ಪ್ರಕ್ರಿಯೆಯಾಯಿತು. ಸಾಧನೆ ಮಾಡಿದ ಮಹಿಳೆಯರನ್ನು ಸನ್ಮಾನಿಸುವ ಸಂಭ್ರಮವೂ ಈ ಸಂದರ್ಭದಲ್ಲಿ ನಡೆಯಿತು. ಇದು ಇಲ್ಲಿಗೇ ಮುಗಿಯಲಿಲ್ಲ, ಸರ್ಕಾರಗಳು ತಾವು ಮಹಿಳೆಯರಿಗಾಗಿ ಕೈಗೊಂಡ ವಿಶೇಷ ಕಾರ್ಯಕ್ರಮಗಳನ್ನು ಕುರಿತಂತೆ ತುತ್ತೂರಿ ಊದಲು ಮಹಿಳಾ ದಿನ ನೆಪವಾಗಿದೆ.

ಕರ್ನಾಟಕ ಸರ್ಕಾರವಂತೂ ಐದು ಮಹಿಳೆಯರ ವಿಶೇಷ ಸಾಮರ್ಥ್ಯವನ್ನು, ಅವರ ಧೈರ್ಯ, ಸಮಾಜ ಸೇವೆಗಳನ್ನು ಗುರುತಿಸಿ ಹೊಸರೂಪದ "ಸ್ತ್ರೀ ಶಕ್ತಿ ಪುರಸ್ಕಾರ"ಗಳನ್ನು ನೀಡಿ ಗೌರವಿಸಿತು ಹಾಗೂ ಮಹಿಳೆಯರಿಗಾಗಿ ತಾವು ಯೋಜಿಸಿಕೊಂಡಿರುವ ವಿಶೇಷ ಕಾರ್ಯಕ್ರಮಗಳನ್ನು ಪ್ರಕಟಪಡಿಸುವುದಕ್ಕೆ ಈ ಸಮಾರಂಭವನ್ನು ವೇದಿಕೆಯನ್ನಾಗಿಸಿಕೊಂಡವು. ಕರ್ನಾಟಕದಲ್ಲಿ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದು ಒಂದೂವರೆ ವರ್ಷಗಳೇ ಸಂದಿದ್ದರೂ ಇನ್ನೂ ಮಹಿಳಾ ಆಯೋಗವನ್ನು ನೇಮಕ ಮಾಡಿಲ್ಲ. ಹೀಗಿರುವಾಗ ಮಹಿಳಾ ದಿನದ ತುತ್ತೂರಿಗೆ ಎಷ್ಟು ಆದ್ಯತೆ ನೀಡಬೇಕೋ ಗೊತ್ತಿಲ್ಲ.

ಎಲ್ಲ ದಿನದ ಸ್ವಾರಸ್ಯದಂತೆ ಮಹಿಳಾ ದಿನವು ಪತ್ರಿಕೆಗಳಿಗೆ, ಮಾಧ್ಯಮದವರಿಗೆ ವಿಶೇಷ ಸುದ್ದಿಯ ಆಗರ: ಎಲ್ಲ ಪತ್ರಿಕೆಗಳು ಮಹಿಳಾ ದಿನದ ವಿಶೇಷ ಲೇಖನಗಳನ್ನು ಪ್ರಕಟಿಸಿದರೆ ಟಿ.ವಿ. ಚಾನಲ್‌ಗಳು ಇನ್ನೂ ಒಂದು ಹೆಜ್ಜೆ ಮುಂದೆ. ಸ್ತ್ರೀ ಪ್ರಧಾನವಾದ ಚಿತ್ರಗಳನ್ನು ಪ್ರದರ್ಶಿಸಿ ತಮ್ಮ ಕರ್ತವ್ಯ ಮುಗಿಯಿತೆಂದು ಕೊಂಡವು. ಅದು ಎಂತಹ ಚಿತ್ರಗಳು? ಕಣ್ಣೀರುಗರೆಯುವ ಕಥಾನಾಯಕಿಯರ, ಹೆಣ್ಣಿನ ಬಗ್ಗೆ ರೂಢ ಮೂಲವಾಗಿರುವ ತಾಳಿಭಾಗ್ಯ, ಹರಿಸಿನ ಕುಂಕುಮದ ಮಂತ್ರ ಪಠಿಸುವ ಅದೇ ಹಳಸಲು ಚಿತ್ರಗಳು.

ಈ ಎಲ್ಲ ಅಂಶಗಳು ಮಹಿಳಾ ದಿನವನ್ನು ಯಾರೂ ಮರೆಯಲಾಗದಂತಹ ಅನಿವಾರ್ಯ ಆಚರಣೆಯಾಗಿಸಿದರೆ, ಕೆಲಸದ ಸ್ಥಳಗಳಲ್ಲಿ ಕೆಲವರಂತೂ ಇದನ್ನು ವ್ಯಾಲಂಟೈನ್ ದಿನದಂತೆ ಆಚರಿಸಿದ್ದೂ ಉಂಟು. ತಮ್ಮ ಮಹಿಳಾ ಸಹೋದ್ಯೋಗಿಗಳನ್ನು ಹೋಟೆಲ್‌ಗೆ, ಪಾರ್ಟಿಗೆ ಕರೆದು ಕೊಂಡು ಹೋಗಿ ಮಹಿಳಾದಿನವನ್ನು ಆಚರಿಸಿದ ಭೂಪರು ಇದ್ದಾರೆ! ಕೆಲವು ಮಹಿಳಾ ಸಂಘಗಳು ಸೌಂದರ್ಯ ಸ್ಪರ್ಧೆಯನ್ನು ಏರ್ಪಡಿಸಿ ಮಹಿಳಾ ದಿನದ ಅರ್ಥಕ್ಕೆ ಸಂಪೂರ್ಣ ತಿಲಾಂಜಲಿಯನ್ನು ಕೊಟ್ಟೂ ಆಯಿತು.

ಮಹಿಳಾ ಮೀಸಲಾತಿಯನ್ನು ಒಂದು ವಿವಾದದ ವಿಷಯವಾಗಿ ಮಾಡಿಕೊಂಡ ಎಲ್ಲ ರಾಜಕೀಯ ಪಕ್ಷಗಳೂ 'ಮಹಿಳಾದಿನ'ದ ಘೋಷಣೆಯಾಗಿ ತಮ್ಮ ಆಶ್ವಾಸನೆಗಳನ್ನು ಕೊಟ್ಟಿದ್ದೇ ಬಂತು. ಪ್ರಧಾನ ಮಂತ್ರಿಯವರೂ ಕೂಡ ದೇಶದ ಮಹಿಳಾ ಸಮುದಾಯಕ್ಕೆ ಮಹಿಳಾ ಮೀಸಲಾತಿಯನ್ನು ದೊರಕಿಸಿಕೊಡುವ ಭರವಸೆಯ ಮಹಾಪೂರವನ್ನೇ ಹರಿಸಿದರು.

ಆದರೆ ಯಾವ ಕಾರಣಕ್ಕಾಗಿ ಮಹಿಳಾ ದಿನಾಚರಣೆಯು ಆರಂಭವಾಯಿತೋ, ಅಂತಹ ಕೆಳವರ್ಗದ ದುಡಿಯುವ ಮಹಿಳೆಯ ಸ್ಥಿತಿ ಅತ್ಯಂತ ಶೋಚನೀಯವಾಗಿಯೇ ಉಳಿದಿದೆ. ಜಾಗತೀಕರಣದ ಬಿಸಿ ಅಬ್ಬರದಲ್ಲಿ ಕೆಲಸಗಳನ್ನು ಕಳೆದು ಕೊಂಡು ಅವರು ಇನ್ನೂ ಶೋಚನೀಯ ಸ್ಥಿತಿಗೆ ತಲುಪುವುದರಲ್ಲಿ ಆಶ್ಚರ್ಯವಿಲ್ಲ. ಒಟ್ಟಾರೆ ಮಹಿಳೆ ಮನೆಯ ಒಳಗೂ ಹೊರಗೂ ನಡೆಸುವ ದುಡಿಮೆಯ ಕಾಯಕದಲ್ಲಿ ನಿರಂತರವಾಗಿ ನುಚ್ಚು ನೂರಾಗುತ್ತಿದ್ದಾಳೆ. ಈ ವಾಸ್ತವ ಸತ್ಯಗಳನ್ನು ಗ್ರಹಿಸಲು ಅವಳು ಅಸಮರ್ಥಳಾದರೆ, ಜಾಗತೀಕರಣ ಅವಳ ಅಸ್ತಿತ್ವವನ್ನು ಸಂಪೂರ್ಣವಾಗಿ ನುಂಗಿ ಹಾಕಿ ಬಿಡುತ್ತದೆ. ಆಗ 'ಮಹಿಳಾ ದಿನಾಚರಣೆ'ಯ ಅರ್ಥ ಎಲ್ಲಿಗೆ ಬಂದು ನಿಲ್ಲುತ್ತದೆ?

- ಅಚಲ

★ ★ ★ ★ ★

RNI No. 45577/88

"Achala" 108, Skyline Surabhi,
14-9, Vidyapeeta Road, BSK III Stage,
Bangalore - 560085

To:

Smt/Sri

CPMG/KA/BG-8/2001
Book-Post/News Letter